ಬಾಳಬೆಳಕು ಸಾಹಿತ್ಯಮಾಲೆಯ ಕಿರಣ—೪೩

# ವನೌಷಧಿಗಳ ಗುಣಧರ್ಮ ಮತ್ತು ವಿವಿಧ ಶಬ್ದಕೋಶ



ಲೇಖಕ :
ತಿರುಕ





ಪ್ರಕಾಶಕರು :
**ಅನಾಥಸೇವಾಶ್ರಮ ವಿಶ್ವಸ್ತ ಸಮಿತಿ, ಮಲ್ಲಾಡಿಹಳ್ಳಿ.**

" VANAUSHADHIGALA GUNADHARMA AND VIVIDHA SHABDAKOSHA " by Tiruka ( Sri Sri Raghavendra Swamiji Founder President, Anathasevashrama Trust, Malladihalli, Holalkere Taluk)
Published by Anathasevashrama Trust, Malladihalli.

First Edition 1979
Second Edition 1981
Third Edition 1990
Forth Edition 1994

ಪ್ರಥಮ ಮುದ್ರಣ ೧೯೭೯
ದ್ವಿತೀಯ ಮುದ್ರಣ ೧೯೮೧
ತೃತೀಯ ಮುದ್ರಣ ೧೯೯೦
ಚತುರ್ಥ ಮುದ್ರಣ ೧೯೯೪



ಬೆಲೆ ೨೫-೦೦ ರೂ. ಗಳು.

ಮುದ್ರಕರು :
ಸರ್ವೋದಯ ಮುದ್ರಣಾಲಯ,
ಅನಾಥಸೇವಾಶ್ರಮ ವಿಶ್ವಸ್ತ ಸಮಿತಿ, ಮಲ್ಲಾಡಿಹಳ್ಳಿ.

# ಸ ಮ ರ್ಪ ಣೆ

ಪ್ರಾಚೀನ ಮತ್ತು ಆಯುರ್ವೇದ ಆಚಾರ್ಯರುಗಳ
ಅಡಿದಾವರೆಗಳಲ್ಲಿ ಶ್ರದ್ಧಾಭಕ್ತಿಗಳಿಂದ ಸಮರ್ಪಿಸಲಾಗಿರುವ
ಗ್ರಂಥಕುಸುಮಾಂಜಲಿ.

ತಿರುಕ.

# ಪ್ರವೇಶ

ಪ್ರಾಚೀನ ಕಾಲದಿಂದ ವಿವಿಧ ವನಸ್ಪತಿಗಳಿಂದಲೂ, ವೃಕ್ಷಗಳಿಂದಲೂ, ತರುಲತೆಗಳಿಂದಲೂ, ಔಷಧದ್ರವ್ಯಗಳಿಂದಲೂ ಕೂಡಿದ ಅರಣ್ಯಗಳಿಗೆ, ವನಗಳಿಗೆ ನಮ್ಮ ಪೂರ್ವಿಕರು ಅತಿ ಉನ್ನತ ಸ್ಥಾನವನ್ನು ಕೊಟ್ಟಿದ್ದರು. ಯಾಕೆಂದರೆ ಆ ವನಗಳಲ್ಲಿರುವ ವೃಕ್ಷಗಳಲ್ಲಿ, ವನಸ್ಪತಿಗಳಲ್ಲಿ, ತರುಲತಾದಿಗಳಲ್ಲಿ ರೋಗನಿವಾರಣೆಯನ್ನುಂಟುಮಾಡಿ—ಆರೋಗ್ಯ, ತುಷ್ಟಿ, ಪುಷ್ಟಿ, ಚೈತನ್ಯವನ್ನುಂಟಾಗಿಸುವ ಶಕ್ತಿ ಇದೆ. ಇಂತಹ ವನಗಳಲ್ಲಿ ವಾಸಮಾಡುವುದರಿಂದ ರಾಜಯಕ್ಷ್ಮಗಳಂತಹ ಮಹಾರೋಗಗಳುಕೂಡ ನಿವಾರಣೆಯಾಗುತ್ತವೆ. ಆದುದರಿಂದಲೇ ಪೂರ್ವದಿಂದಲೂ ರೋಗನಿವಾರಣೆಗಾಗಿ, ಮನಃಶಾಂತಿಗಾಗಿ, ಆತ್ಮತೃಪ್ತಿಗಾಗಿ ನಮ್ಮ ಪೂರ್ವಜರು ವನವಾಸಿಗಳಾಗಿರುತ್ತಿದ್ದರು. ಅಷ್ಟೇ ಅಲ್ಲ—ಗೃಹಸ್ಥಾಶ್ರಮ ಜೀವನದನಂತರ ಅರಣ್ಯಗಳಲ್ಲೇ ಇದ್ದು ತಮ್ಮ ವಾನಪ್ರಸ್ಥಾಶ್ರಮವನ್ನು ಕಳೆಯಬೇಕೆಂದು ಆಗಿನ ಒಂದು ಕಟ್ಟಳೆಯೂ ಆಗಿದ್ದಿತು. ಅದರೆ ಋಷಿಮುನಿಗಳು ಮಾತ್ರ ವನಗಳಲ್ಲಿಯೇ ಆಶ್ರಮವನ್ನು ಕಟ್ಟಿಕೊಂಡು ಅಲ್ಲಿಯ ಎಲೆಮನೆಗಳಲ್ಲಿಯೇ ತಪಸ್ಸನ್ನಾಚರಿಸುತ್ತ ತಮ್ಮ ಶಿಷ್ಯರಿಗೆ ಪಾಠಪ್ರವಚನಾದಿಗಳನ್ನು ಹೇಳಿಕೊಡುತ್ತ ನೆಮ್ಮದಿಯಿಂದಿರುತ್ತಿದ್ದರು. ಅವರು ಅರಣ್ಯಗಳಲ್ಲಿರುವ ತರುಲತಾದಿಗಳನ್ನು, ವೃಕ್ಷಗಳನ್ನು ಅನವಶ್ಯಕವಾಗಿ ಕಡಿದು, ಕೆಡವಿ, ಹಾಳುಮಾಡದೆ ತಮ್ಮ ಮಕ್ಕಳಿಗಿಂತಲೂ ಮಿಗಿಲಾಗಿ ಪೋಷಿಸಿಕೊಂಡು ಬರುತ್ತಿದ್ದುದರಿಂದ ಅವು ಸಮೃದ್ಧವಾಗಿ ಬೆಳೆದು ಪರಸ್ಪರ ಅನ್ಯೋನ್ಯತೆಯಿಂದ ಇದ್ದುವು, ಅಂದಿನ ಕಾಲದಲ್ಲಿ ವನಗಳೆಂದರೆ ಜೀವನೀಯ ಶಕ್ತಿ ಪ್ರದವಾದ ತಾಣಗಳೆಂದೇ ಪರಿಗಣಿಸಲಾಗುತ್ತಿತ್ತು. ಅಂತಹ ಪ್ರಶಾಂತ ವಾತಾವರಣದಲ್ಲೇ ನಮ್ಮ ಪ್ರಾಚೀನ ಋಷಿಮುನಿಗಳೆಲ್ಲ ಬೆಳೆದರು; ಕಾವ್ಯ, ಕಲೆ, ಸಾಹಿತ್ಯಗಳನ್ನು ಸೃಷ್ಟಿಸಿದರು; ಮಹಾಮಹಾವ್ಯಕ್ತಿಗಳನ್ನು ಕಟೆದು, ರೂಪವನ್ನಿತ್ತು ಪ್ರಪಂಚಕ್ಕೆ ನೀಡಿದರು.

ಸಾಂಸ್ಕೃತಿಕ ದೃಷ್ಟಿಯಿಂದ ಪರಿಶೀಲಿಸುವಾಗ ಭಾರತದ ಶ್ರೇಷ್ಠಸಾಹಿತ್ಯ, ಕಲೆ, ಕಾವ್ಯಗಳ ಸೃಷ್ಟಿಯಾದುದೂ ಅರಣ್ಯಗಳಲ್ಲಿಯ ಪರ್ಣಕುಟೀರಗಳಲ್ಲೇ: ಉಪನಿಷತ್ತುಗಳ ರಚನೆಯಾದುದು ಮಹಾರಣ್ಯಗಳಲ್ಲಿಯ ಎಲೆಮನೆಗಳಲ್ಲಿ, ರಾಮಾಯಣ ಸೃಷ್ಟಿಯಾದುದು ವಾಲ್ಮೀಕಿ ಮಹರ್ಷಿಗಳ ಪರ್ಣಕುಟೀರವಿದ್ದ ಗೊಂಡಾರಣ್ಯದ ಮಧ್ಯದಲ್ಲಿ; ಭಾರತದಂತಹ ಮಹಾಕಾವ್ಯದ ರಚನೆಯನ್ನು ಶ್ರೀ ವ್ಯಾಸಮಹರ್ಷಿಗಳು ಮಾಡಿದುದು ಅರಣ್ಯದಲ್ಲಿಯ ತಮ್ಮ ಆಶ್ರಮದಲ್ಲಿ; ಚರಕ, ಸುಶ್ರುತ, ವಾಗ್ಭಟರೇ ಮೊದಲಾದ ಮಹರ್ಷಿಗಳು ತಮ್ಮ ಮಹಾಮಹಾ ವೈದ್ಯಗ್ರಂಥಗಳನ್ನು ರಚಿಸಿದುದೂ ವನಗಳಲ್ಲಿದ್ದ ಆಶ್ರಮಗಳಲ್ಲೇ; ವಿಶ್ವಾಮಿತ್ರ, ಭಾರದ್ವಾಜ, ಅಗಸ್ತ್ಯ,

**ಗೌತಮ, ಅತ್ರಿ, ಪರಶುರಾಮ, ಮತಂಗ, ಯಾಜ್ಞವಲ್ಕ್ಯ, ಪರಾಶರರೇ** ಮೊ ಲಾದವರೆಲ್ಲರ ಸಾಧನಾ ಕ್ಷೇತ್ರಗಳೂ ಅರಣ್ಯಗಳೇ; ಅಷ್ಟೇ ಅಲ್ಲ–ಲವಕುಶ ಬಲರಾಮಕೃಷ್ಣರು, ಭೀಷ್ಮ, ಕರ್ಣರೇ ಮೊದಲಾದ ಮಹಾಮಹಿಮರ ವ್ಯಾಸ ನಡೆದುದೂ ಅರಣ್ಯಗಳಲ್ಲೇ...ಯಾಕೆಂದರೆ ಅರಣ್ಯಗಳು, ವನಗಳು ನಮ್ಮ ಸಾ ಪ್ರಶಾಂತನಿಲಯಗಳು; ಸಾಂಸ್ಕೃತಿಕ ಕೇಂದ್ರಗಳು, ಚೈತನ್ಯದ ತಾಣಗ ಆದುದರಿಂದಲೇ ಪ್ರಾಚೀನ ಮಹರ್ಷಿಗಳು ವನವಾಸದಲ್ಲಿದ್ದು ಕೋ ಆಯುರ್ವೇದದ ಪ್ರಾಣಪ್ರತಿಷ್ಠೆ ಮಾಡಿದರು.

ಹೀಗೆ ಹೇಳಿದಾಗ ಈ ಅರಣ್ಯಗಳಿಗೆ, ವನಗಳಿಗೆ ಇಷ್ಟೊಂದು ಉನ್ನ ಸ್ಥಾನ ಉಂಟಾಗಲು ಕಾರಣವೇನು ಎಂಬ ಪ್ರಶ್ನೆಯು ತಾನೇ ತಾನಾಗಿ ಉಂಟಾ ತ್ತದೆ; ಇದಕ್ಕೆ ಕಾರಣ ಅಲ್ಲಿರುವ ವನೌಷಧಿಗಳೇ. ವನೌಷಧಿ ಎಂಬಲ್ಲಿ ವನ ಮತ್ತು ಔಷಧಿ ಎಂಬ ಎರಡು ಪದಗಳುಂಟು. ಇಲ್ಲಿ ವನ ಎಂದರೆ ವೃಕ್ಷಸಮೂಹವಿರು ಪ್ರದೇಶ ಎಂದರ್ಥ; ಔಷಧಿ ಎಂಬುದು ದ್ರವ್ಯಬೋಧಕವಾದ ಶಬ್ದವಿರುತ್ತದ ಆದುದರಿಂದಲೇ **'ದ್ರವ್ಯಾಣಿ ಪುನರೋಷದಯಃ'** ಎಂದು ಶಾಸ್ತ್ರಕಾರ **ಹೇಳಿದ್ದಾರೆ**, ಅರ್ಥಾತ್ ಓಷಧಿ ಎಂಬುದು ಸಂಪೂರ್ಣವಾಗಿ ಸ್ಥಾವರ ಜಂಗ ಭೇದಪದಾರ್ಥ ವಾಚಕವು ಆದರೆ ಇಲ್ಲಿ ಪ್ರಕೃತದ ವಿಷಯಕ್ಕೆ ಸಂಬಂಧಪಟ್ಟಂ ಸ್ಥಾವರದಲ್ಲಿ ವನಸ್ಪತಿ, ವೃಕ್ಷ, ವೀರುಧ (ಬಳ್ಳಿ) ಮತ್ತು ಓಷಧಿಗಳೆಂಬ ನಾಲ್ ಭೇದಗಳುಂಟು. ಇವುಗಳಲ್ಲಿ ಹೂಬಿಡದೆ ಫಲಕೊಡುವ ಅತ್ತಿ, ಹಲಸು, ಮೊ ಲಾದವುಗಳನ್ನು ವನಸ್ಪತಿಗಳೆಂದೂ ಹೂಗಳನ್ನು ಬಿಟ್ಟು ಫಲವನ್ನು ಕೊಡು ಮಾವು, ದಾಳಿಂಬ, ನೇರಳೆ, ಪೇರಳೆ ಮೊದಲಾದುವುಗಳನ್ನು ವೃಕ್ಷಗಳೆಂದ ಉದ್ದನೆಯ ಬಳ್ಳಿಗಳಿಂದ ಕೂಡಿರುವ ಅಮೃತಬಳ್ಳಿ, ಆಕಾಶಬಳ್ಳಿ ಮೊದಲಾದ ಗಳನ್ನು ವೀರುಧ (ಲತೆ, ಬಳ್ಳಿ)ಗಳೆಂದೂ ಮತ್ತು ವರುಷ ವರುಷವೂ ಆಯಾ ಋತುಮಾನವನ್ನನುಸರಿಸಿ ಫಲಗಳನ್ನು ಬಿಟ್ಟು ಮತ್ತೆ ಸಾಯುವ ಯವಾದಿಗಳನ್ನು ಓಷಧಿಗಳೆಂದೂ ಹೆಸರಿಸಲಾಗಿದೆ. ಈ ಗ್ರಂಥದಲ್ಲಿ ಹೇಳಲಾಗಿರುವ ಮೇಲಿ ಮತ್ತು ಇತರ ಕೆಲವೊಂದು ವಿಷಯಗಳೂ ನನ್ನ **'ಸ್ವಯಂವೈದ್ಯ'** ಗ್ರಂಥದಲ್ಲಾಗಲೆ ತಿಳಿಸಿರುವೆನಾದರೂ ತಿರುಗಿ ಇಲ್ಲಿ ಬರೆದಿರುವುದರಿಂದ ಇದು ಪುನರುಕ್ತಿ ದೋಷವಾ ಕಂಡರೂ ಈ ಗ್ರಂಥವು ನೇರವಾಗಿ ವನೌಷಧಿಗೇ ಮೀಸಲಾಗಿರುವ ಗ್ರಂಥವಾ ರುವುದರಿಂದ ಇಲ್ಲಿ ಪುನಃ ಅದನ್ನೇ ಹೇಳುವುದು ದೋಷವಲ್ಲವೆಂದು ನಾನು ಭಾವಿಸುತ್ತೇನೆ.

ವನೌಷಧಿಗಳು ತಮ್ಮಲ್ಲಿರುವ ರಸ, ಗುಣ, ವೀರ್ಯ, ವಿಪಾಕಗಳ ಪ್ರಭಾವ ದಿಂದ ಶರೀರಘಟಕಗಳಿಂದ ಸಜೀವರೂಪವನ್ನು ಅನಾಯಾಸವಾಗಿ ಪಡೆದು ರೋಗ ನಿವಾರಣೆಯ ಅಥವಾ ದೇಹಸ್ವಾಸ್ಥ್ಯದ ಉದ್ದಿಷ್ಟಕಾರ್ಯವನ್ನು ನೆರವೇರಿಸುತ್ತವೆ.

ಆದುದರಿಂದ ಈ ರಸ ವೀರ್ಯಾದಿಗಳಿಗೆ ದಕ್ಕೆಯುಂಟಾಗದಂತೆ ವಿಧಿ ಪೂರ್ವಕವಾಗಿಯೇ ವನೌಷಧಿಗಳ ಸಂಗ್ರಹಣೆಯನ್ನು ಕೂಡ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಅವನ್ನು ಬಿಟ್ಟು ಅಂಗಡಿಗಳಲ್ಲಿ ಹೇಗೆ ಹೇಗೋ ಸಂಗ್ರಹಿಸಿಟ್ಟ ಗಿಡಮೂಲಿಕೆಗಳನ್ನು ಔಷಧಕ್ಕಾಗಿ ಉಪಯೋಗಿಸುವುದು ಸರ್ವಥಾಯೋಗ್ಯವಲ್ಲ. ಚಿಕಿತ್ಸಾಕರ್ಮಕ್ಕೆ ಹೊಸದಾಗಿ ಸಂಗ್ರಹಿಸಿದ, ಗುಣಮಟ್ಟದಲ್ಲಿ ಉತ್ತಮವಾಗಿರುವ ಮೂಲಿಕೆಗಳನ್ನೇ ಉಪಯೋಗಿಸಬೇಕೆಂದಿದೆ, ಯಾಕೆಂದರೆ ಇವುಗಳಲ್ಲಿ ಶರೀರರಕ್ಷಣೆಗೆ, ರೋಗವಿಮುಕ್ತಿಗೆ ಹಿತಕರವಾದ ಮತ್ತು ಸತ್ವಯುಕ್ತವಾದ ದ್ರವ್ಯಸತ್ವವಿರುತ್ತದೆ. ಈ ಸತ್ವವು, ಈ ವೀರ್ಯಪ್ರಭಾವವು ತೀರ ಒಣಗಿದ, ಬತ್ತಿದ, ಜೀರ್ಣವಾದ, ಅತಿ ಪುರಾಣ ಗಿಡಮೂಲಿಕೆಗಳಲ್ಲಿರುವುದಿಲ್ಲ. ಆಗತಾನೇ ಕಿತ್ತುತಂದ ಉತ್ತಮ ಗಿಡಮೂಲಿಕೆಗಳಿಂದ ತೆಗೆದ ಸ್ವರಸವು ಹೆಚ್ಚು ಪರಿಣಾಮಕಾರಿಯಾಗುತ್ತದೆ. ಅದರಂತೆಯೇ ಗಿಡಮೂಲಿಕೆಗಳನ್ನು ಅಥವಾ ವನಸ್ಪತಿಗಳನ್ನು ಸಂಗ್ರಹಿಸಲು ಯೋಗ್ಯವಾದ ಕಾಲವೂ ಅಗತ್ಯ. ಆದುದರಿಂದಲೇ ವನಸ್ಪತಿ ದ್ರವ್ಯಗಳನ್ನು ಸಂಗ್ರಹಿಸುವಾಗ ಕಾಲ, ರೀತಿ, ಸಂರಕ್ಷಣವಿಧಿ ಈ ಮೂರನ್ನೂ ಗಮನದಲ್ಲಿಟ್ಟುಕೊಳ್ಳಬೇಕೆಂಬುದಾಗಿ ಹೇಳಲಾಗಿದೆ. ಹಾಗಿಲ್ಲದೇ ಎಂದೋ, ಹೇಗೋ ಕಡಿದುರುಳಿಸಿ, ಹೇಗೋ ಒಣಗಿಸಿ, ಹೇಗೋ ಸಂರಕ್ಷಿಸಿಟ್ಟುಕೊಂಡ ಔಷಧ ದ್ರವ್ಯಗಳು ಗುಣಮಟ್ಟದಲ್ಲಿ ತೀರ ಕಳಪೆ ಎಂದೇ ತಿಳಿಯಬೇಕು,

ಈ ಸಂಬಂಧವಾಗಿ ಸಾಮಾನ್ಯ ನಿಯಮಗಳನ್ನು ಹೀಗೆ ಹೇಳಲಾಗಿದೆ.– ವನಸ್ಪತಿಯ ಎಲೆಯನ್ನು ಸಂಗ್ರಹಿಸಬೇಕಾದ ಸಂದರ್ಭದಲ್ಲಿ ಆ ಗಿಡದ ಅಥವಾ ಮರದ ಹೂವು ಅರಳುವುದಕ್ಕೆ ಮೊದಲೇ ಸಂಗ್ರಹಿಸಬೇಕೆಂದೂ, ಗಡ್ಡೆ ಅಥವಾ ಬೇರನ್ನು ಸಂಗ್ರಹಿಸುವಾಗ ಗಿಡವು ಒಣಗಿದ ನಂತರ ಸಂಗ್ರಹಿಸಬೇಕೆಂದೂ ಹೇಳಿದ್ದಾರೆ. ಇದನ್ನೇ ಚೆನ್ನಾಗಿ ಬಲಿತ ಮರದಬೇರನ್ನೂ, ತೊಗಟೆಯನ್ನೂ ಪ್ರಾತಃಕಾಲದಲ್ಲೂ ಮತ್ತು ರಾತ್ರಿಯೂ ಸಂಗ್ರಹಿಸಬೇಕೆಂದು ಸುಲಭದಲ್ಲಿ ತಿಳಿಸಿಬಿಡಬಹುದು; ಅಲ್ಲದೆ ಆದಿತ್ಯವಾರ (ಭಾನುವಾರ, ರವಿವಾರ) ಎಲ್ಲ ಗಿಡಮೂಲಿಕೆಗಳ ಸಂಗ್ರಹಣಕ್ಕೆ ಅತಿಶ್ರೇಷ್ಠವಾದ ದಿನವೆಂದೂ ಕೂಡ ಶಾಸ್ತ್ರಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಯಾಕೆಂದರೆ ಆ ಕಾಲದಲ್ಲಿ ಅವು ವೀರ್ಯವತ್ತಾಗಿದ್ದು ಅದರಿಂದ ಸಿದ್ಧಗೊಳಿಸಿದ ಔಷಧಗಳೂ ಪ್ರಭಾವಯುಕ್ತವಾಗಿರುತ್ತವೆ. ಅಷ್ಟೇ ಅಲ್ಲ–ಹಿಮದಿಂದಲೂ ನೀರಿನಿಂದಲೂ ಮುಚ್ಚಲ್ಪಟ್ಟು, ಬಣ್ಣಗೆಟ್ಟು ಕುದಿದ, ಅರ್ಧ ಸುಟ್ಟು, ಹುಳುಕು ಹತ್ತಿದ, ಮಸಣದಲ್ಲಿ ಬೆಳೆದ, ಜೌಗುಪ್ರದೇಶದಲ್ಲಿರುವ, ನಡೆದಾಡುವ ದಾರಿಯಲ್ಲಿ ಹುಟ್ಟಿದ ಗಿಡಮೂಲಿಕೆಯ ಎಲೆ, ಬೇರು, ನಾರು, ತೊಗಟೆ, ಹಣ್ಣು, ಹೂವು, ಕಾಯಿ, ಅಂಟು ಮೊದಲಾದ ಯಾವುದೇ ಭಾಗವನ್ನು ಚಿಕಿತ್ಸೆಯಲ್ಲಿ

ಉಪಯೋಗಿಸಕೂಡದೆಂಬುದಾಗಿ ಕೂಡ ಶಾಸ್ತ್ರದ ಕಟ್ಟುಪ್ಪಣೆಯುಂಟು: ಯಾಕೇ೦ದ ಇವುಗಳ ಗುಣ, ವೀರ್ಯಗಳು ನಷ್ಟಹೊಂದಿರುತ್ತವೆ. ಇವುಗಳನ್ನೆಲ್ಲ ಯೋಗ್ಯ ನಾದ ವೈದ್ಯನು ಚೆನ್ನಾಗಿ ತಿಳಿದಿರಬೇಕು.

ಅರಸಿನ, ತಗರ ಮೊದಲಾದ ಗಡ್ಡೆ, ಗೆಣಸು, ಬೇರು ಮೊದಲಾದುವುಗಳ ಸಂಗ್ರಹಿಸುವಾಗ ಮೊದಲು ಅವುಗಳನ್ನು ಅಗೆದು ತೆಗೆದು ನೀರಿನಿಂದ ಚೆನ್ನಾ ತೊಳೆದು ಸ್ವಚ್ಛಗೊಳಿಸಿ ಒಣಗಿಸಬೇಕು. ರೇವಲಚಿನ್ನಿ, ಶುಂಠಿ, ಕೋಳಿಕು ಮನಗಡ್ಡೆ (ಕಲಿಹಾರಿ), ಕಚೋರ ಮೊದಲಾದುವುಗಳನ್ನು ತೊಳೆದು, ಸೀಳಿ,ತುಂ ತುಂಡುಗಳಾಗಿ ಮಾಡಿ ಒಣಗಿಸಿ ಉಪಯೋಗಿಸಬೇಕು. ಆದರೆ ಒಣಗಿಸುವ ಸ್ಥಳ ಸ್ವಚ್ಛವೂ ಧೂಳು ದೂಸರಗಳು ಬೀಳದಂತೆಯೂ ಇರಬೇಕು. ಅಲ್ಲದೆ ಗಿಡಮೂಲಿ ಗಳನ್ನು ಬಿಸಿಲಿನಲ್ಲಿ ಒಣಗಿಸುವುದಕ್ಕಿಂತಲೂ ನೆರಳಿನಲ್ಲಿ ಒಣಗಿಸುವುದು ಹೆಚ್ಚು ಶ್ರೇಯಸ್ಕರ. ಆದರಲ್ಲೂ ಬ್ರುಂಹಣ (ವೃದ್ಧಿಯನ್ನುಂಟುಮಾಡುವುದು) ಕಾರಕವಾ ಆಲ, ಅಶ್ವತ್ಥ ಮೊದಲಾದುವುಗಳನ್ನು ನೆರಳಿನಲ್ಲಿ ಒಣಗಿಸುವುದೇ ಶ್ರೇಷ್ಠ ವನಸ್ಪತಿಗಳನ್ನು ಸಂಗ್ರಹಿಸಿ ಹೆಚ್ಚುಕಾಲ ಇಟ್ಟಿರುವುದರಿಂದ ಅವುಗಳ ವೀರ್ಯ ನಷ್ಟಹೊಂದಿ ಅವು ಅನುಪಯುಕ್ತವಾಗುತ್ತವೆ; ಆದುದರಿಂದ ಸಂಗ್ರಹಿಸಿಡುವ ಅವಧಿಯು ಆರು ತಿಂಗಳುಗಳಿಂದ ಒಂದು ವರ್ಷಕ್ಕೆ ಮೀರಬಾರದು, ಆದರೆ ಅತಿಬಜೆ ಸೊಗದೆಬೇರು, ಬಂಗಿಸೊಪ್ಪು ಮೊದಲಾದುವುಗಳು ಅತಿಬೇಗನೆ ಕೆಡುತ್ತವೆ ಆದುದರಿಂದ ಇವುಗಳ ಸಂರಕ್ಷಣೆಯಲ್ಲಿ ಅತಿ ಎಚ್ಚರಿಕೆಬೇಕು. ಇವುಗಳನ್ನೆಲ್ಲ ಮುಚ್ಚಿದ ಪೆಟ್ಟಿಗೆಯಲ್ಲಾಗಲೀ ಅಥವಾ ಜಾಡಿಗಳಲ್ಲಾಗಲೀ, ಮರಳು ಇಲ್ಲವೇ ಇದ್ದಲಿನ ಮಧ್ಯೆ ಇರಿಸಿ ತೇವಾಂಶ ಆರದಂತೆ ಕಾಯ್ದಿರಿಸಬೇಕು. ಅಂತೂ ಎಲ್ಲ ವನಸ್ಪತಿಗಳನ್ನೂ ಬಹು ಎಚ್ಚರಿಕೆಯಿಂದ ಸಂರಕ್ಷಿಸುವುದು ಅತ್ಯಾವಶ್ಯಕ. ಹೀಗೆ ಸೇರಿಸುವಿಕೆ (ಸಂಗ್ರಹಿಸುವಿಕೆ), ಒಣಗಿಸುವಿಕೆ ಮತ್ತು ಸಂರಕ್ಷಿಸುವಿಕೆ ಈ ಮೂರು ವಿಷಯಗಳ ಕಡೆಗೆ ಗಮನಕೊಟ್ಟು ಉಪಯೋಗಿಸುವ ಔಷಧ ದ್ರವ್ಯಗಳಿಂದ ಸಿದ್ಧವಾದ ಔಷಧಗಳು ರೋಗ ಚಿಕಿತ್ಸೆಯಲ್ಲಿ ಹೆಚ್ಚಿನ ಪ್ರಭಾವವನ್ನು ಬೀರಿ ರೋಗವನ್ನು ಪರಿಹರಿಸುತ್ತವೆ.

ಮೇಲೆ ತಿಳಿಸಿರುವಂತೆ ರೋಗ ಚಿಕಿತ್ಸೆಗೆ ಉಪಯೋಗಿಸುವ ಗಿಡಮೂಲಿಕೆಗಳೆಲ್ಲ ಆಗತಾನೆ ತೆಗೆದದ್ದಾಗಿರಬೇಕು; ಅಥವಾ ವಿಧಿಪೂರ್ವಕವಾಗಿ ಕಾಯ್ದಿರಿಸಿದರೂ ಆರು ತಿಂಗಳಿಂದ ಒಂದು ವರ್ಷಕ್ಕಿಂತ ಹಳೆಯದಾದ ವನಸ್ಪತಿದ್ರವ್ಯಗಳನ್ನು ಔಷಧಕ್ಕೆ ಉಪಯೋಗಿಸಲೇಬಾರದೆಂಬುದಾಗಿ ಕಂಠೋಕ್ತವಾಗಿ ಹೇಳಿದೆ. ಆದರೆ ಬೆಲ್ಲ; ಪಿಪ್ಪಲಿ, ವಾಯುವಿಳಂಗ, ಕೊತ್ತುಂಬರಿ ಮೊದಲಾದ ಕೆಲಕೆಲವೇ ದ್ರವ್ಯಗಳು ಹಳೆಯದಾದಷ್ಟೂ ಅವರ ಉಪಯೋಗ ಹೆಚ್ಚು. ಆದರೂ ಇವುಗಳನ್ನು ಕೂಡ

ಮೇಲೆ ತಿಳಿಸಿರುವಂತೆ ಎಚ್ಚರಿಕೆಯಿಂದ ಸಂರಕ್ಷಿಸುವುದು ಮಾತ್ರ ಅಗತ್ಯವೆಂಬುದನ್ನು ಯಾರೂ ಮರೆಯಲಾಗದು.

ಪ್ರಾಚೀನ ಆಚಾರ್ಯರುಗಳು ಉಪಯುಕ್ತವಾದ ವನಸ್ಪತಿಗಳನ್ನು ಅವುಗಳಲ್ಲಿಯ ರಸ, ಗುಣ, ವೀರ್ಯಗಳ ಆಧಾರದ ಮೇಲಿಂದ ಅಧ್ಯಯನಮಾಡಿ ಅವುಗಳನ್ನು ವರ್ಗೀಕರಿಸಿರುತ್ತಾರೆ. ಹೀಗೆ ಮಾಡಿದವರಲ್ಲಿ ಮೊದಲನೆಯವರೇ ಚರಕಾಚಾರ್ಯರು. ಇವರು ಹತ್ತು ಹತ್ತು ವನಸ್ಪತಿಗಳಂತೆ ಐವತ್ತು ಗಣಗಳನ್ನು ಮಾಡಿ ಅವುಗಳ ಗುಣ, ವೀರ್ಯ ಮೊದಲಾದವುಗಳನ್ನು ಪ್ರಚುರಪಡಿಸಿದರೆ, ಸುಶ್ರುತರು ಏಳುನೂರ ಅರವತ್ತು ವನಸ್ಪತಿಗಳನ್ನು ಮೂವತ್ತೇಳು ಗಣಗಳನ್ನಾಗಿ ವರ್ಗೀಕರಿಸಿ ಅವುಗಳ ಗುಣಧರ್ಮಗಳನ್ನು ಬರೆದಿರುತ್ತಾರೆ. ವಾಗ್ಭಟರು ಗಿಡಮೂಲಿಕೆಗಳ ಗುಣವೀರ್ಯಾದಿಗಳನ್ನೆಲ್ಲ ಸೂತ್ರರೂಪವಾಗಿ ಬರೆದಿರುತ್ತಾರೆ. ಅನಂತರ ಈ ಸಂಬಂಧವಾಗಿ ಧನ್ವಂತರಿ ನಿಘಂಟು, ಭಾವಪ್ರಕಾಶನಿಘಂಟು, ಮದನಪಾಲನಿಘಂಟು, ರಾಜನಿಘಂಟು, ಸೋಡಲ ನಿಘಂಟು, ಸಾಲಿಗ್ರಾಮ ನಿಘಂಟುಗಳೇ ಮೊದಲಾದ ಅನೇಕ ಗ್ರಂಥಗಳು ಬಂದವು. ಈ ಒಂದೊಂದು ಗ್ರಂಥಗಳಲ್ಲೂ ಅನುಕ್ರಮವಾಗಿ ಹೆಚ್ಚು ಹೆಚ್ಚಿಗೆ ವನಸ್ಪತಿ ದ್ರವ್ಯಗಳ ಗುಣವೀರ್ಯಾದಿಗಳ ಸಂಬಂಧವಾಗಿ ಸಂಗ್ರಹಿಸಿ ಕೊಡಲಾಗಿದೆ; ಮತ್ತು ಇವುಗಳೆಲ್ಲವೂ ಆಯುರ್ವೇದೋನ್ನತಿಗೆ ಸಹಾಯಕವಾಗಿಯೇ ಇವೆ. ಈ ದಾರಿಯಲ್ಲಿ ಈ ನನ್ನ ಗ್ರಂಥ **ವನೌಷಧಿಗಳ ಗುಣಧರ್ಮ**ವೆಂಬುದು ಒಂದು ಅಲ್ಪಸೇವೆ. ಇಲ್ಲಿ ನಾನು ಹಿಂದಿನೆಲ್ಲ ಮಹಾಶಯರ ಗಣಗಳ ರೀತಿಯಲ್ಲಿ ವನಸ್ಪತಿಗಳನ್ನು ವರ್ಗೀಕರಿಸಿ ಬರೆಯದೆ ಅಕಾರಾನುಕ್ರಮದಲ್ಲಿ ಗುಣ, ರಸ, ವೀರ್ಯಾದಿಗಳನ್ನು ಕೊಟ್ಟಿರುತ್ತೇನೆ. ಇದು ಸಾಮಾನ್ಯ ಜನರಿಗೂ ತಿಳಿಯಲು ಅನುಕೂಲವಾಗಬಹುದೆಂದು ನನ್ನ ಅನಿಸಿಕೆ. ಈ ನನ್ನ ಪ್ರಯತ್ನವು ಶ್ರೀರಾಮನ ಸೇತುಬಂಧನಕಾರ್ಯದಲ್ಲಿ ಅಳಿಲಿನ ಮಳಲು ಸೇವೆಯಂತೆ ತೀರ ಚಿಕ್ಕ ಸಾಧನೆಯಾದರೂ ಶ್ರದ್ಧಾಯುಕ್ತವಾದ ಪ್ರಯತ್ನವೆಂದು ನಮ್ರತೆಯಿಂದ ನಿವೇದಿಸುತ್ತೇನೆ; ಈ ದಿಟ್ಟಿನಲ್ಲಿ ಆಗತಕ್ಕ ಕಾರ್ಯ ಅಪಾರವಾಗಿದೆ. ಎಲ್ಲಕ್ಕೂ ಶ್ರೀ ಗುರು ಕರುಣೆ ಮತ್ತು ಜನತೆಯ ಪೂರ್ಣ ಸಹಕಾರ ಬೇಕು.



# ಗ್ರಂಥಋಣ

**ಸಂಸ್ಕೃತ**–ಚರಕಸಂಹಿತೆ, ಸುಶ್ರುತಸಂಹಿತೆ, ಅಷ್ಟಾಂಗಹೃದಯ, ಭಾವಪ್ರಕಾಶ, ಭಾವಪ್ರಕಾಶನಿಘಂಟು, ಶಾರ್ಙ್ಗಧರಸಂಹಿತೆ, ಮಾಧವನಿದಾನ, ಯೋಗರತ್ನಾಕರ, ರಾಜನಿಘಂಟು, ಬ್ರಹ್ಮವೈವರ್ತಕ ಪುರಾಣ ಮತ್ತು ವೇದಗಳು,

**ಕನ್ನಡ**—ಆಯುರ್ವೇದ ಚಿಕಿತ್ಸಾಸಂಗ್ರಹ, ಉಪಯುಕ್ತ ಗಿಡಮೂಲಿಕೆಗಳು, ಅನೇಕ ವೈದ್ಯಕೀಯ ಲೇಖನಗಳು, ಶರೀರರಚನಾ ಮತ್ತು ಗುಣಧರ್ಮಶಾಸ್ತ್ರ, ದೀರ್ಘಾಯು(ಮಾಸಪತ್ರಿಕೆ), ಹಳ್ಳಿಯವೈದ್ಯ, ಆರೋಗ್ಯದರ್ಪಣ, ಔಷಧೀಯ ಗಿಡಗಳು, ಹಳೆಯ ಕೈಬರಹದ ಹೊತ್ತಿಗೆಗಳು, ಅನುವಾದಗಳು, ಟಿಪ್ಪಣಿಗಳು, ತಾಳೆಗರಿಯ ಲೇಖನಗಳು.

**ಹಿಂದಿ**—ಅಭಿನವಬೂಟಿದರ್ಪಣ, ಆಯುರ್ವೇದಕೋಶ, ಆಯುರ್ವೇದ ಪ್ರಕಾಶ, ಆಯುರ್ವೇದ (ಮಾಸಿಕ), ಆಯುರ್ವೇದ ವಿಶ್ವಕೋಶ, ಆಯುರ್ವೇದ ವಿಜ್ಞಾನ, ವಿವಿಧ ಮಾಸಿಕಗಳು, ಹಿಂದಿ ಲೇಖನಗಳು, ಧನ್ವಂತರಿ (ಮಾಸಿಕ ಮತ್ತು ಹಲವು ವಿಶೇಷಾಂಕಗಳು), ನಿದಾನಚಿಕಿತ್ಸಾ, ಹಸ್ತಾಮಲಕ, ಬೈಷಜ್ಯರತ್ನಾವಲಿ, ವೈದ್ಯ (ಮಾಸಿಕ), ಪ್ರಾಣಾಚಾರ್ಯ (ಮಾಸಿಕ ಮತ್ತು ವಿಶೇಷಾಂಕ), ಸಚಿತ್ರ ಆಯುರ್ವೇದ (ಮಾಸಿಕ ಮತ್ತು ವಿಶೇಷಾಂಕ), ಔಷಧ ಗುಣಧರ್ಮ, ಬೈಷಜ್ಯ ಬೋಧಿನಿ, ತಪಸ್ವೀಜಿಮಹಾರಾಜ್ (ತಪಸೀಬಾಬಾ) ರವರಿಂದ ಪಡೆದ ಟಿಪ್ಪಣಿ, ಬಾಬಾಲಕ್ಷ್ಮಣದಾಸ್(ನನ್ನ ಆಯುರ್ವೇದ ಗುರುಗಳು)ರವರು ಬರೆಯಿಸಿದ ಟಿಪ್ಪಣಿ, ವರಣಿದ ಸ್ವಾಮಿಶಿವಾನಂದ (ನನ್ನ ಯೋಗಗುರು) ರವರಿಂದ ಪಡೆದ ಟಿಪ್ಪಣಿ, ಬಾಲಬ್ರಹ್ಮಚಾರಿ. ರಾಜರತ್ನ ಪ್ರೊ॥ ಮಾಣಿಕ್ಯರಾಯರಿಂದ (ನನ್ನ ವ್ಯಾಯಾಮದ ಗುರುಗಳು) ಪಡೆದ ಟಿಪ್ಪಣಿ, ವಿವಿಧ–ಮರಾಠಿ, ಇಂಗ್ಲೀಷ್ ಗ್ರಂಥಗಳು ಹಾಗೂ ಲೇಖನಗಳು.

# ಮುನ್ನುಡಿ

ವನೌಷಧಿಗಳ ಗುಣಧರ್ಮವೆಂಬ ಈ ಗ್ರಂಥವು ನನ್ನ **'ಸ್ವಯಂವೈದ್ಯ'** ಗ್ರಂಥಕ್ಕೆ ಪುರವಣಿ (Supplementary) ಅಥವಾ ಪರಿಶಿಷ್ಟವೇ ಆಗಿದೆ. ವೈದ್ಯಕೀಯ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಔಷಧಗಳ ಗುಣಧರ್ಮವು ತಿಳಿದಿರುವುದು ಅತಿ ಅಗತ್ಯ. ಆದುದರಿಂದಲೇ ಇದನ್ನು ಸ್ವಯಂವೈದ್ಯದಲ್ಲಿಯೇ ಸೇರಿಸಬೇಕೆಂದು ಇಚ್ಛಿಸಿದ್ದೆ. ಆದರೆ ಸ್ವಯಂವೈದ್ಯದ ಮುನ್ನುಡಿಯಲ್ಲೇ ತಿಳಿಸಿರುವಂತೆ ಅದು ಗೊತ್ತುಮಾಡಿದ 500 ಪುಟಕ್ಕೂ ಮೀರಿ 630 + 20 ಪುಟಕ್ಕೆ ಮುಟ್ಟಿದುದರಿಂದ ಗ್ರಾಹಕರ ಮತ್ತು ಪ್ರಕಟಣಾಕಾರರ ಹಿತದೃಷ್ಟಿಯಿಂದ ತಡೆಹಿಡಿದು ಇಂದಿದನ್ನು ಪ್ರತ್ಯೇಕವಾಗಿಯೇ ತಮ್ಮ ಮುಂದಿಡುತ್ತಿದ್ದೇನೆ. ಇದು ಆಯುರ್ವೇದ ವಿದ್ಯಾರ್ಥಿಗಳಿಗೂ ಮತ್ತು ಎಲ್ಲ ಕುಟುಂಬವರ್ಗಕ್ಕೂ ಕೂಡ ಹೆಚ್ಚಿನ ಉಪಯೋಗವಾದೀತೆಂದು ಭಾವಿಸುತ್ತೇನೆ. ಇದರಲ್ಲಿ ಒಂದು ಔಷಧದ್ರವ್ಯದ ಹೆಸರಿನಲ್ಲಿ ಅದಕ್ಕೆ ರೂಢಿವಾಚಕವಾಗಿರುವ ಬೇರೆ ಬೇರೆ ಪ್ರದೇಶಗಳಲ್ಲಿಯ ದೇಶೀಯ ಹೆಸರುಗಳನ್ನೂ ಕೊಡಲಾಗಿದೆ; ಯಾಕೆಂದರೆ ಒಂದೇ ವನಸ್ಪತಿಗೆ ಒಂದೇ ಭಾಷೆಯಲ್ಲೇ ಬೇರೆ ಬೇರೆ ಹೆಸರುಗಳುಂಟು. ಅಲ್ಲದೆ ಇದರಲ್ಲಿ ಕನ್ನಡಕ್ಕೆ ತತ್ಸಮಾನವಾದ ಸಂಸ್ಕೃತ, ಹಿಂದಿ, ತಮಿಳು, ತೆಲುಗು, ಇಂಗ್ಲೀಷ್ ಮೊದಲಾದ ಬೇರೆ ಬೇರೆ ಭಾಷೆಗಳ ಹೆಸರುಗಳನ್ನು ಕೂಡ ಕೊಟ್ಟಿರುವುದರಿಂದ ಇದರ ಪ್ರಯೋಜನವು ಇನ್ನೂ ವ್ಯಾಪಕವಾಗಿ ಆಗಲು ಅವಕಾಶವಾಗಿದೆ ಎಂದು ತಿಳಿಯುತ್ತೇನೆ. ಹೀಗೆ ಈ ಗ್ರಂಥದಲ್ಲಿ ವನೌಷಧಿಗಳ ಗುಣಧರ್ಮವೂ ಮತ್ತು ವಿವಿಧ ಭಾಷಾಕೋಶವೂ ಕೂಡ ಜೊತೆಜೊತೆಯಾಗಿಯೇ ಕೊಡುವ ಪ್ರಯತ್ನ ನಡೆದಿದೆ ಎಂದು ತಿಳಿಸಲು ಸಂತೋಷಪಡುತ್ತೇನೆ.

ಪ್ರಸ್ತುತ ಈ ಪುಸ್ತಕದಲ್ಲಿ ಸುಮಾರು ೨೩೩ ವನೌಷಧಿಗಳ ವಿವಿಧ ಭಾಷಾಕೋಶವನ್ನೂ ಮತ್ತು ಗುಣಧರ್ಮವನ್ನೂ ಕೊಟ್ಟಮಾತ್ರಕ್ಕೆ ಭಾರತದಲ್ಲಿ ಬೆಳೆಯುವುದು ಅಥವಾ ದೊರೆಯುವುದು ಇವಿಷ್ಟೇ ವನೌಷಧಿಗಳು ಎಂದು ಅರ್ಥ ಮಾಡಿಕೊಳ್ಳಬಾರದು. ನಮ್ಮ ಮುಂದಿರುವ ಅಪಾರವಾದ ಗಿಡಮೂಲಿಕೆಗಳೆಲ್ಲವೂ ಔಷಧಕ್ಕೆ ಬರುವಂತವುಗಳೇ. ಆದರೆ ಅವುಗಳ ಉಪಯೋಗವನ್ನು ನಾವು ಅರಿತಿಲ್ಲ ವೆಂದಿಷ್ಟೇ ಹೇಳಬಹುದು. ಅವುಗಳ ಬಗೆಗಿರುವ ನಮ್ಮ ಅಲ್ಪ ಜ್ಞಾನವನ್ನರಿತು ಅವುಗಳು—'ಹುಲುಮಾನವಾ ! ಇಷ್ಟೇ ಏನು ನಿನ್ನ ಬುದ್ಧಿವಂತಿಕೆ ? ' ಎಂದು

ಸಕ್ಕರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಯಾಕೆಂದರೆ ಇಂದು ವಿಜ್ಞಾನ ಹೇಳುತ್ತದೆ. ಕಲ್ಲಿಗೂ ಜೀವ ಉಂಟೆಂದು: ಆದರೆ ಇದನ್ನರಿಯುವ ಜ್ಞಾನಮಾತ್ರ ನಮಗಿಲ್ಲ ಇದು ಯಾರ ತಪ್ಪು ? ಯಾಕೆಂದರೆ ಚರಕ ಸುಶ್ರುತ, ವಾಗ್ಭಟರ ಕಾಲದಲ್ಲಿ ಸುಮಾರು 700 ಔಷಧದ್ರವ್ಯಗಳ ಹೆಸರುಗಳು ಗ್ರಂಥಸ್ಥವಾಗಿರುವುದು ತಿಳಿಯುತ್ತದೆ; ಆದರೆ ಇತ್ತೀಚಿನ ಕೆಲವು ಗ್ರಂಥಗಳಲ್ಲಿ 1500 ರಿಂದ 2000 ವರೆ ಔಷಧದ್ರವ್ಯಗಳಿವೆ ಎಂಬುದನ್ನು ನಾನು ಓದಿದ್ದೇನೆ. ಇವುಗಳಲ್ಲಿ ಖನಿಜ ಪ್ರಾಣಿಜ ಮತ್ತು ವನಸ್ಪತಿಗಳೆಲ್ಲವೂ ಸೇರುತ್ತವೆ. ಆದರೆ ಈ ಗ್ರಂಥದಲ್ಲಿರುವುದು ವಿಶೇಷವಾಗಿ ರೂಢಿಯಲ್ಲಿರುವ ಕೆಲವು ದ್ರವ್ಯಗಳ ಪರಿಚಯ ಮಾತ್ರವೆಂದು ನಿಸ್ಸಂದೇಹವಾಗಿ ಹೇಳಲಿಚ್ಛಿಸುತ್ತೇನೆ. ಈ ಕ್ಷೇತ್ರದಲ್ಲಿ ಇನ್ನೂ ಆಗತಕ್ಕ ಕಾರ್ಯ ಅಪಾರವಾಗಿದೆ. ಆದರೆ ಇಲ್ಲೊಂದು ಸತ್ಯವಿಷಯವನ್ನು ಜನತೆಯ ಮುಂದಿಡದಿದ್ದರೆ ಅದು ಪ್ರಾಚೀನ ಆಚಾರ್ಯರುಗಳಿಗೆ ಎಸಗಿದ ಮಹಾಪರಾಧವಾದೀತೆಂದು ಅವನ್ನು ಬರೆಯುತ್ತಿದ್ದೇನೆ. ಇಂದಿನ ವಿಜ್ಞಾನಯುಗ; ಪ್ರತಿಯೊಂದು ದ್ರವ್ಯದ ಗುಣಧರ್ಮಗಳನ್ನು ತಿಳಿಯಲು, ಶರೀರದ ಆಂತರಿಕ ದೋಷಾದೋಷಗಳನ್ನು ಅರಿಯಲು ನಮ್ಮಲ್ಲಿ ಬೇಕಾದಷ್ಟು ಯಾಂತ್ರಿಕ ಉಪಕರಣಗಳು ಸಿದ್ಧವಾಗಿವೆ. ಆದರೆ ಅಂದು ಇವುಗಳ್ಯಾವುವೂ ಇಲ್ಲದಿರುವಾಗ ಅಂದಿನ ಆಚಾರ್ಯರು ಹೇಗೆ ಔಷಧ ದ್ರವ್ಯಗಳ ಗುಣಧರ್ಮಗಳನ್ನು ಅರಿಯುತ್ತಿದ್ದರು ಮತ್ತು ಹೇಗೆ ರೋಗಾರೋಗಗಳನ್ನು ತಿಳಿಯುತ್ತಿದ್ದರು ಎಂಬುದು ತೀರ ತಾರ್ಕಿಕವಾಗಿಯೂ, ಆಶ್ಚರ್ಯವಾಗಿಯೂ ಕಾಣಬಹುದು. ಆದರೆ ಇದರಲ್ಲಿ ಜಿಜ್ಞಾಸೆಯ ಅಥವಾ ಸಮಸ್ಯೆಯ ಪ್ರಶ್ನೆಯೇನೂ ಇಲ್ಲ; ಸತ್ಯವಿಷಯ ಇಷ್ಟೇ—ಅವರೆಲ್ಲರಿಗೂ ಅವರಲ್ಲಿದ್ದ ಅಥವಾ ಅವರು ಸಂಪಾದಿಸಿ ಕೊಂಡಿದ್ದ ಅಂತಃಶಕ್ತಿಯೆ ಇದಕ್ಕೆ ಕಾರಣವಾಗಿತ್ತು. ಅವರು ಕೇವಲ ಸಾಮಾನ್ಯ ವೈದ್ಯರಷ್ಟೇ ಆಗಿರಲಿಲ್ಲ; ಮಹಾತಪಸ್ಸಾಧಕರೂ, ಯೋಗಪುಂಗವರೂ ಆಗಿದ್ದರು. ಆ ತಪಸ್ಸಿನ ಬಲದಿಂದ, ಯೋಗಶಕ್ತಿಯಿಂದ ಗಳಿಸಿದ ಅಂತಃ ಶಕ್ತಿಯೇ ಅವರಿಗೆ ಪ್ರೇರಕವಾಗಿ ನಿಂತು ಎಕ್ಸ್‌ರೇ, ಕಾರ್ಡಿಯೋಗ್ರಾಫ್. ಮೆಟಾಬೋಲರ್‌ಗೂ ಮಿಗಿಲಾದ ರೀತಿಯಲ್ಲಿ ಅವರಿಗೆ ಸಹಾಯಕವಾಗಿ ಕೆಲಸ ಮಾಡುತ್ತಿತ್ತು. ಆದರೆ ಇಂದು ಪಾಶ್ಚಾತ್ಯಯಂತ್ರಗಳೇ ಇಂದಿನ ಪರಿಣತ ವೈದ್ಯರುಗಳಿಗೆ ಆಧಾರ. ಇಲ್ಲಿ ಒಂದು ಆಧ್ಯಾತ್ಮಿಕ, ಇನ್ನೊಂದು ಭೌತಿಕ; ಎಷ್ಟು ಅಂತರ ! ಆದರೂ ಯುಗಧರ್ಮಕ್ಕೆ ಅನುಗುಣವಾಗಿ ಇರುವ ಎಲ್ಲ ವನೌಷಧಿಗಳ ಗುಣಧರ್ಮವನ್ನೂ ಸಂಶೋಧನೆಯ ಒರೆಗಲ್ಲಿಗೆ ಹಚ್ಚಿ ಅರಿತು ಪ್ರಕಟಿಸುವುದು ಹೆಚ್ಚು ಸೂಕ್ತವೆಂದು ನನ್ನ ಅನಿಸಿಕೆ: ಇಲ್ಲಿ ಮಡಿವಂತಿಕೆಯು ಸಲ್ಲದು. ಜ್ಞಾನವು ಯಾವ ಮಾರ್ಗದಿಂದಲೇ ಬಂದರೂ ಗ್ರಾಹ್ಯವೇ. ನೃತ್ಯದಲ್ಲಿ ಕೆಲವಷ್ಟೇ ಮುದ್ರೆಗಳನ್ನೋ, ಪದಪಟಿಗಳನ್ನೋ ಅಭ್ಯಸಿಸಿ ನಾನೊಬ್ಬ ನೃತ್ಯಪ್ರವೀಣನೆಂದರೆ ಅದೆಷ್ಟು

ಅಭ್ಯಾಸವಾದೀತು! ನೃತ್ಯದಲ್ಲಿ ಬರುವ ಎಲ್ಲ ಪದಪತಿಗಳನ್ನೂ, ಮುದ್ರೆಗಳನ್ನೂ ಅಭ್ಯಸಿಸಿ ಅದರ ಶಾಸ್ತ್ರಾಧ್ಯಯನವನ್ನೂ ಚೆನ್ನಾಗಿ ಮಾಡಿದಾಗ ಮಾತ್ರ ಹೊಸ ಹೊಸ ಗೀತೆಗಳಿಗೆ, ರೂಪಕಗಳಿಗೆ ನೃತ್ಯವನ್ನು ಅಳವಡಿಸಿ ಪ್ರದರ್ಶಿಸಲು ಸಾಧ್ಯ. ಅದರಂತೆಯೇ ಇಲ್ಲೂ ವನೌಷಧಿಗಳ ಸರ್ವತೋಮುಖವಾದ ಜ್ಞಾನಾನುಭವವಾದಾಗ ಮಾತ್ರ ಆತನಿಂದ ಒಂದಲ್ಲ ಹಲವು ಪ್ರಯೋಗಗಳನ್ನು ರೂಪಿಸಲು ಸಾಧ್ಯ. ಆ ನಿಟ್ಟಿನಲ್ಲಿ ಇದೊಂದು ನನ್ನ ಅಳಿಲುಸೇವೆ ಅಷ್ಟೆ. ನನ್ನ ಅಭಿಪ್ರಾಯದಲ್ಲಿ ಪ್ರತಿಯೊಂದು ವನೌಷಧಿಗಳ ಗುಣಧರ್ಮದ ಜೊತೆಗೆ ಅದರ ಪರಿಚಯವು ಸಾಮಾನ್ಯ ಜನರಿಗೂ ಆಗುವಂತೆ ಅದರ ಪ್ರತಿಯೊಂದು ಭಾಗದ(ಬೇರು, ಕಾಂಡ, ಎಲೆ, ಹೂ, ಕಾಯಿ, ಬೀಜ ವಗೈರೆ) ಚಿತ್ರಗಳನ್ನು ತೆಗೆದು ಅವುಗಳನ್ನೆಲ್ಲಾ ಆರ್ಟ್‌ಪೇಪರಿನಲ್ಲಿ ಅಚ್ಚುಹಾಕಿಸಿ ಪ್ರಕಟಿಸುವ ಆಶೆ ಇದೆ. ಆದರೆ ಅದಕ್ಕೆ ಲಕ್ಷಾಂತರ ರೂಪಾಯಿಗಳು ಬೇಕು. ಶ್ರೀ ಗುರುಕರುಣೆಯುಂಟಾದಾಗ ಅದೂ ಆಗಲಿ. ಈಗ ಇದು ಆನೆಯನ್ನು ಕನ್ನಡಿಯಲ್ಲಿ ಹಿಡಿದು ತೋರಿಸುವ ಪ್ರಯತ್ನ ಅಷ್ಟೇ...ಇರಲಿ—ಪ್ರಕೃತ ಮೇಲೆ ತಿಳಿಸುವಂತೆ ಆಧ್ಯಾತ್ಮಿಕದ ಹಿನ್ನೆಲೆಯಲ್ಲೇ ಬೆಳೆದು ಬಂದ ಆಯುರ್ವೇದ ಚಿಕಿತ್ಸಾಪದ್ಧತಿಯು ವೇದಗಳಲ್ಲಿ ಬ್ರಹ್ಮನಿಂದ ದಕ್ಷಪ್ರಜಾಪತಿಗೆ ಉಪದೇಶಿಸಲ್ಪಟ್ಟು ಅಲ್ಲಿಂದ ಪರಂಪರಾನುಗತವಾಗಿ ಒಂದು ಸ್ವತಂತ್ರ ಶಾಸ್ತ್ರವಾಗಿಯೇ ಉಳಿದು ಬಂದಿದೆ ಎಂಬುದನ್ನು ನಾನು ನನ್ನ ಹಿಂದಿನ '**ಸ್ವಯಂವೈದ್ಯ**'ದಲ್ಲೇ ವಿನಂತಿಸಿರುವೆ. ಆದುದರಿಂದ ಈ ಸಂದರ್ಭದಲ್ಲಿ ಪುರಾಣೇತಿಹಾಸಗಳಲ್ಲಿ ದೊರಕುವ ಪ್ರಾಚೀನ ಆಯುರ್ವೇದಾಚಾರ್ಯರುಗಳ ಮತ್ತು ಅವರ ಕೃತಿಗಳ ಪರಿಚಯವನ್ನು ಸೂಕ್ಷ್ಮವಾಗಿ ಓದುಗರಿಗೆ ಮಾಡಿಕೊಡುವುದು ಸೂಕ್ತವೆಂಬುದರ ಮೇಲಿಂದ ಆ ಕಾರ್ಯವನ್ನಿಲ್ಲಿ ಮಾಡುತ್ತಿದ್ದೇನೆ.

'**ಚರಣವ್ಯೂಹ**'ವೆಂಬ ಗ್ರಂಥದಲ್ಲಿ ಆಯುರ್ವೇದವು ಋಗ್ವೇದದ ಉಪವೇದವೆಂಬುದಾಗಿ ಹೇಳಿದರೆ ಸುಶ್ರುತಸಂಹಿತೆಯಲ್ಲಿ ಅಥರ್ವಣವೇದದ ಉಪಾಂಗ ಆಯುರ್ವೇದವೆಂಬ ಉಲ್ಲೇಖವಿದೆ. ಬ್ರಹ್ಮವೈವರ್ತ ಪುರಾಣದಲ್ಲಿ ನಾಲ್ಕು ವೇದಗಳ ಅರ್ಥವನ್ನು ಪರಿಗ್ರಹಿಸಿ ಬ್ರಹ್ಮದೇವನು ಆಯುರ್ವೇದವನ್ನು ರಚಿಸಿದನೆಂದೂ ತಿಳಿಸಲಾಗಿದೆ. ಇದನ್ನೆಲ್ಲ ಪರಿಶೀಲಿಸುವಾಗ ಜನಸಾಮಾನ್ಯರಿಗೆ ಇದರಲ್ಲಿ ಯಾವುದು ಸರಿ ಯಾವುದು ತಪ್ಪು ಎಂಬ ಸಂದೇಹಕ್ಕೆ ಕಾರಣವಾಗುತ್ತದೆ. ಆದರೆ ಆಳವಾಗಿ ವಿಚಾರಮಾಡುವಾಗ ಎಲ್ಲ ವೇದಗಳಲ್ಲೂ ಅಲ್ಲಲ್ಲಿ ಸಂದರ್ಭೋಚಿತವಾಗಿ ಆಯುರ್ವೇದದ ವಿಚಾರವು ಬಂದಿರುವುದನ್ನು ಕಾಣಬಹುದು. ಆದರೂ ಅವುಗಳೆಲ್ಲ ಒಂದು ಸಂಘಟಿತ ರೂಪವನ್ನು ಹೊಂದಿರಲಿಲ್ಲ. ಇಂತಹ ಸಂದರ್ಭದಲ್ಲಿ ವೈದ್ಯಶಾಸ್ತ್ರದ ದೃಷ್ಟಿಯಿಂದಲೂ, ಲೋಕಕಲ್ಯಾಣದ ದೃಷ್ಟಿಯಿಂದಲೂ ಇದಕ್ಕೊಂದು ವ್ಯವಸ್ಥಿತ

ರೂಪವನ್ನು ಕೊಡುವ ಇಚ್ಛೆಯಿಂದ ಬ್ರಹ್ಮನೇ ಎಲ್ಲ ವೇದಗಳ ಪರಿಶೀಲನೆಯಿಂದ ಈ ಕಾರ್ಯವನ್ನು ಮಾಡಿದನೆಂಬುದೇ ಇಲ್ಲಿ ಸರಿಯಾದ ಅರ್ಥ. ಹೀಗಾಗಿಯೇ ಆತನಿಂದ ಒಂದು ಲಕ್ಷ ಶ್ಲೋಕಗಳೂ, ಒಂದುಸಾವಿರ ಅಧ್ಯಾಯಿಗಳೂ ಉಳ್ಳ '**ಬ್ರಹ್ಮಸಂಹಿತೆ**' ಎಂಬ ವೈದ್ಯಶಾಸ್ತ್ರವು ರಚಿಸಲ್ಪಟ್ಟಿತು. ಅನಂತರ ಅದನ್ನು ಕಲಿಯುವವರಿಗೆ ಸರಳಗೊಳಿಸುವ ಇಚ್ಛೆಯಿಂದ ಆತನೇ ಇದನ್ನು ಸಂಕ್ಷಿಪ್ತಗೊಳಿಸಿ ಎಂಟುಭಾಗಗಳಾಗಿ ವಿಂಗಡಿಸಿದನು. ಇದನ್ನೇ ಬ್ರಹ್ಮನು ದಕ್ಷಪ್ರಜಾಪತಿಗೆ ಉಪದೇಶಿಸಿದನು. ದಕ್ಷಪ್ರಜಾಪತಿಯು ಇದನ್ನು ಅಶ್ವಿನೀದೇವತೆಗಳಿಗೆ ಉಪದೇಶಿಸಿದನು ಎಂದು ಪುರಾಣವು ಹೇಳುತ್ತದೆ. ಆದರೆ ಆ ಬಹ್ಮ ಸಂಹಿತೆಯಾಗಲೀ ಅಥವಾ ಅದರ ಸಂಕ್ಷಿಪ್ತ ವಿಭಾಗಗಳೇ ಆಗಲೀ ಇಂದು ದೊರಕುವುದಿಲ್ಲ. ಆದುದರಿಂದ ಇಂದದು ಪುರಾಣವಾಗಿಯೇ ಉಳಿದಿದೆ... ಇರಲಿ. ಈಗ ಮುಂದೆ...

೧. **ಅಶ್ವಿನೀದೇವತೆಗಳು**—ಇವರು ದೇವತೆಗಳ ವೈದ್ಯರು. ಇವರು ಶಲ್ಯತಂತ್ರ (ಶಸ್ತ್ರಚಿಕಿತ್ಸೆ) ಮತ್ತು ಶಾಲಾಕ್ಯತಂತ್ರ (ಕಾಯಚಿಕಿತ್ಸೆ) ಗಳೆರಡರಲ್ಲೂ ಪ್ರಾವೀಣ್ಯತೆಯನ್ನು ಪಡೆದಿದ್ದರೆಂದು ವೇದಗಳಲ್ಲೂ, ಪುರಾಣಗಳಲ್ಲೂ ಕೂಡ ವರ್ಣಿತವಾಗಿದೆ. ಅಶ್ವಿನೀ ದೇವತೆಗಳು ಚಿಕಿತ್ಸಾತಂತ್ರ, ರಸರತ್ನಸಮುಚ್ಚಯ, ಅಶ್ವಿನೀಯಸಂಹಿತೆ ಮೊದಲಾದ ಅನೇಕ ವೈದ್ಯಗ್ರಂಥಗಳನ್ನು ರಚಿಸಿರುವರೆಂಬ ಉಲ್ಲೇಖವಿದೆ. ಆದರೆ ಆ ಗ್ರಂಥಗಳ್ಯಾವುವೂ ಇಂದು ಉಪಲಬ್ಧವಿಲ್ಲ. ಆದರೂ ಅಶ್ವಿನೀಸಂಹಿತೆಯ ಹಸ್ತಪ್ರತಿಯೊಂದು ಮದ್ರಾಸಿನ ಓರಿಯೆಂಟಲ್ ಲ್ಯಾಬ್ರರಿಯಲ್ಲಿ ಸಂಗ್ರಹಿತವಾಗಿದೆ. ಅಲ್ಲದೆ ಬೇರೆ ಬೇರೆ ಪ್ರಾಚೀನ ಗ್ರಂಥಗಳಿಂದ ರಸರತ್ನ ಸಮುಚ್ಚಯವೆಂಬ ಗ್ರಂಥವನ್ನೂ ಅಶ್ವಿನೀದೇವತೆಗಳು ರಚಿಸಿದರಾಗಿ ತಿಳಿಯುತ್ತದೆ.

೨. **ಇಂದ್ರ**—ಈತನು ದೇವತೆಗಳ ಒಡೆಯ. ದೇವತೆಗಳಿಗೂ ಮತ್ತು ರಾಕ್ಷಸರಿಗೂ ಮೇಲಿಂದ ಮೇಲೆ ಯುದ್ಧಗಳೂ ನಡೆಯುತ್ತಲೇ ಇದ್ದವು. ಇಂದ್ರನ ಗುರುಗಳು ಬೃಹಸ್ಪತ್ಯಾಚಾರ್ಯರು; ರಾಕ್ಷಸರ ಗುರುಗಳು ಶುಕ್ರಾಚಾರ್ಯರು. ಇವರಿರ್ವರೂ ಚಿಕಿತ್ಸಾ ಪ್ರವೀಣರೇ, ಆದರೆ ಶುಕ್ರಾಚಾರ್ಯರಲ್ಲಿ ಸಂಜೀವಿನೀ ವಿದ್ಯೆಯು ಸಿದ್ಧಿಯಿತ್ತು. ಇಂದ್ರನು ದೇವತೆಗಳಿಂದ ವೈದ್ಯವಿದ್ಯೆಯ ಉಪದೇಶವನ್ನು ಪಡೆದನು. ಆದರೂ ಸಂಜೀವಿನೀವಿದ್ಯೆಯ ಸಿದ್ಧಹಸ್ತರಾದ ಶುಕ್ರಾಚಾರ್ಯರ ಶಿಷ್ಯ ಕೋಟಿಯ ಇದಿರು ಸೆಣಸಿ ಬದುಕಲು ಅಮರತ್ವವನ್ನೀಯುವ ಅಮೃತವನ್ನು ಪಡೆಯದೆ ಅವರಿಗೆ ಗತ್ಯಂತರವೇ ಇರಲಿಲ್ಲ. ಆದುದರಿಂದಲೇ ಸಮುದ್ರಮಥನ ನಡೆಯಿತು; ಆಗಲೇ ಅಲ್ಲಿ ಧನ್ವಂತರಿಯ ಉದಯವಾಗಿ ಅಮೃತವು ಸಿದ್ಧಿಸಿತು. ಇಂದ್ರನ ಭಾರಧ್ವಾಜರೇ ಮೊದಲಾದ ಅನೇಕ ಮಹನೀಯರಿಗೆ ವೈದ್ಯವಿದ್ಯೆಯನ್ನು ಉಪದೇಶಿಸಿದನೆಂದು ಪುರಾಣೇತಿಹಾಸ ಹೇಳುತ್ತವೆ. ಆದರೆ ಆತನೇ ವೈದ್ಯಕೀಯ

ಗ್ರಂಥಗಳನ್ನೂ ರಚಿಸಿರುವನೆಂಬ ವಿಷಯದಲ್ಲಿ ಎಲ್ಲೂ ಉಲ್ಲೇಖವಿಲ್ಲ; ಇದ್ದರೂ ಅವು ದೊರೆತಿಲ್ಲ.

೩. **ಭಾರದ್ವಾಜ** (ಭರದ್ವಾಜ)—ಅತಿ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಋಷಿಗಳ ಮೂಲಕವಾಗಿಯೇ ವೇದಸಮ್ಮತವಾದ ಧರ್ಮಸಂಸ್ಕೃತಿಗಳ ಪ್ರಚಾರವಾಗುತ್ತಿತ್ತು. ಋಷಿಗಳು ಅರಣ್ಯದಲ್ಲಿಯೇ ವಾಸವಾಗಿದ್ದರೂ ಜನ ಸಂಪರ್ಕವನ್ನೂ ಇಟ್ಟುಕೊಂಡಿದ್ದರು ಜನತೆಯ ಸ್ವಾಸ್ಥ್ಯ ರಕ್ಷಣೆಯ ಹೊಣೆಯು ಋಷಿಗಳ ಮೇಲೆಯೇ ಇತ್ತು. ಹೀಗಿರಲು ಒಮ್ಮೆ ದೇಶದಾದ್ಯಂತ ಉಂಟಾದ ರೋಗಾದ್ಯುಪದ್ರವಗಳ ಆತಂಕದಿಂದ ಕಳವಳಗೊಂಡ ಋಷಿ ಸಮೂಹವು ಅತಿ ಪ್ರಾಜ್ಞರೂ, ದಕ್ಷರೂ ಆದ ಭಾರದ್ವಾಜರನ್ನು ವಿಶೇಷವಾದ ವೈದ್ಯ ಶಿಕ್ಷಣವನ್ನು ಪಡೆದುಬರುವುದಕ್ಕಾಗಿ ಇಂದ್ರನ ಕಡೆಗೆ ಕಳುಹಿಸಿದನು. ಭರದ್ವಾಜರು ದೇವತೆಗಳ ಗುರುವಾದ ಬೃಹಸ್ಪತ್ಯಾಚಾರ್ಯರ ಮಕ್ಕಳಾದುದರಿಂದ ದೇವೇಂದ್ರನು ಅತಿಮಮತೆಯಿಂದಲೇ ಅವರಿಗೆ ವೈದ್ಯವಿದ್ಯೆಯನ್ನು ಸಾಂಗೋಪಾಂಗವಾಗಿ ಉಪದೇಶಿಸಿದನು. ಹೀಗಾಗಿ ಈವರೆವಿಗೂ ಕೇವಲ ದೇವತೆಗಳ ಸಮೂಹದಲ್ಲೇ ಪ್ರಚಾರದಲ್ಲಿದ್ದ ಆಯುರ್ವೇದವು ಮಾನವರಿಗೂ ಮುಟ್ಟುವಂತಾಯ್ತು. ಅಲ್ಲದೆ ಭರದ್ವಾಜರೇ ಮಾನವಕುಲದಲ್ಲಿ ಆಯುರ್ವೇದವನ್ನು ಪ್ರಚಾರಮಾಡಿದ ಪ್ರಥಮ ಪುರುಷರಾಗಿರುತ್ತಾರೆ. ಇದರಿಂದ ಕೃಷ್ಣಾತ್ರೇಯರೇ ಮೊದಲಾದ ಅನೇಕ ಶಿಷ್ಯ ಪ್ರಶಿಷ್ಯರು ಆಯುರ್ವೇದ ಪರಂಪರೆಯಲ್ಲಿ ಬೆಳೆದು ಬಂದಿದ್ದಾರೆ. ಭಾರದ್ವಾಜ ಸಂಹಿತೆ ಎಂಬೊಂದು ವೈದ್ಯಗ್ರಂಥವನ್ನು ಭಾರದ್ವಾಜ ಮಹರ್ಷಿಗಳು ಬರೆದಿರುವರೆಂದು ಹೇಳಲ್ಪಟ್ಟಿದೆ, ಆದರದು ದೊರೆತಿಲ್ಲ.

೪. **ಆತ್ರೇಯರು**—ಇವರಿಗೆ ಕೃಷ್ಣಾತ್ರೇಯರು, ಪುನರ್ವಸುಗಳು ಎಂಬ ಹೆಸರುಗಳೂ ಇದ್ದವು. ಇವರು ಭಾರಧ್ವಾಜ ಮಹರ್ಷಿಗಳ ನೇರ ಶಿಷ್ಯರು ಈ ಮಹರ್ಷಿಗಳು ಆತ್ರೇಯ ಸಂಹಿತೆ ಎಂಬೊಂದು ವೈದ್ಯಗ್ರಂಥವನ್ನು ಬರೆದಿರುವು ದಾಗಿಯೂ ಮತ್ತು ಅದರಲ್ಲಿ ಐದು ಅಧ್ಯಾಯಗಳಿದ್ದು ಅದು ನಲವತ್ತಾರು ಸಾವಿರ ಶ್ಲೋಕಗಳಿಂದ ಕೂಡಿದ್ದಿತೆಂಬುದಾಗಿಯೂ ತಿಳಿಯಲಾಗಿದೆ. ಆದರೆ ಇಂದದು ದೊರೆಯುತ್ತಿಲ್ಲ. ಇದೇ ಸಂಹಿತೆಯು ಬೇರೆ ಬೇರೆ ಭಾಗಗಳನ್ನು ವೃದ್ಧಾತ್ರೇಯ ಸಂಹಿತೆ ಬೃಹದಾತ್ರೇಯ ಸಂಹಿತೆ, ಮಧ್ಯಮಾತ್ರೇಯ ಸಂಹಿತೆ, ಕನಿಷ್ಠಾತ್ರೇಯ ಸಂಹಿತೆ, ಕೃಷ್ಣಾತ್ರೇಯ ಸಂಹಿತೆ ಎಂಬ ಹೆಸರುಗಳಿಂದ ಶ್ರೀ ವಾಸುದೇವಾನುಭವ, ತೀಷಟ ತೋಡರಾನಂದರೇ ಮೊದಲಾದ ವೈದ್ಯಶ್ರೇಷ್ಠರು ವಿರಚಿಸಿರುತ್ತಾರೆ ಅಲ್ಲದೆ ಸ್ಮೃತಿಸಂಹಿತೆ ಎಂಬ ಹೆಸರಿನಿಂದ ಕೂಡ ಈ ಗ್ರಂಥ ಪ್ರಸಿದ್ಧಿ ಹೊಂದಿದೆ.

೫. **ಅಗ್ನಿವೇಶ**—ಕೃಷ್ಣಾತ್ರೇಯರು ತಮ್ಮ ಗುರುಗಳಾದ ಭಾರದ್ವಾಜರಿಂದ ಅಧ್ಯಯನ ಮಾಡಿದ ಆಯುರ್ವೇದ ವಿದ್ಯೆಯನ್ನು ಅಗ್ನಿವೇಶ, ಭೇಲ, ಜತೂಕರ್ಣ

ಹಾರೀತ, ಕ್ಷಾರಪಾಣಿ, ಪರಾಶರರೆಂಬ ಆರು ಮಂದಿ ಶಿಷ್ಯರಿಗೆ ಉಪದೇಶಿಸಿದರೆಂದು ಹಿಂದೆಯೇ ಹೇಳಲಾಗಿದೆ. ಅಗ್ನಿವೇಶರೇ ಅವರಲ್ಲಿ ಮೊದಲಿಗರು. ಇವರು "ಅಗ್ನಿವೇಶಸಂಹಿತೆ" ಎಂಬೊಂದು ಗ್ರಂಥವನ್ನು ರಚಿಸಿರುತ್ತಾರೆ. ಇವೇ ಮುಂದೆ ಚರಕಮುನಿಗಳಿಂದ ಸಂಸ್ಕರಿಸಲ್ಪಟ್ಟು ಚರಕಸಂಹಿತೆ ಎಂದೇ ಇಂದಿಗೂ ಪ್ರಖ್ಯಾತವಾಗಿರುತ್ತದೆ.

೬. **ಭೇಲ**—ಇವರು ಭೇಲಸಂಹಿತೆ ಎಂಬೊಂದು ವೈದ್ಯಕೀಯ ಗ್ರಂಥವನ್ನು ಬರೆದಿದ್ದಾರೆ. ಇವರು ಆತ್ರೇಯರ ಶಿಷ್ಯರು.

೭. **ಹಾರೀತರು**—ಇವರೂ ಆತ್ರೇಯರ ಶಿಷ್ಯರು; ಇವರೂ ಕೂಡ ಹಾರೀತಸಂಹಿತೆ ಎಂಬೊಂದು ಗ್ರಂಥವನ್ನು ಬರೆದಿದ್ದಾರೆ.

೮. **ಜಾತೂಕರ್ಣ**
೯. **ಪರಾಶರ**
೧೦. **ಕ್ಷಾರಪಾಣಿ**

ಇವರು ಮೂವರೂ ಆತ್ರೇಯ ಮಹರ್ಷಿಗಳ ಶಿಷ್ಯರೇ ಇವರು ಪ್ರತಿಯೊಬ್ಬರೂ ತಮ್ಮ ತಮ್ಮ ಹೆಸರಿನಲ್ಲಿ ಒಂದೊಂದು ಸಂಹಿತೆಗಳನ್ನು ಬರೆದಿರುವುದಾಗಿ ತಿಳಿಯುತ್ತದೆ; ಆದರೆ ಅವುಗಳು ಈಗ ಲಭ್ಯವಿಲ್ಲ.

೧೧. **ಚರಕಮಹರ್ಷಿ**—ಇವರು ಉತ್ತರ ಭಾರತದ ವಾರಣಾಸಿಯಲ್ಲಿ ಕ್ರಿಸ್ತಪೂರ್ವ ೩೨೦ರಲ್ಲಿ ಜನಿಸಿದರಾಗಿ ತಿಳಿಯುತ್ತದೆ; ಇವರಿಗೆ ಪತಂಜಲರೆಂಬ ಇನ್ನೊಂದು ಹೆಸರೂ ಇತ್ತೆಂಬುದಾಗಿ ಅನೇಕಗ್ರಂಥಗಳ ಆಧಾರದಿಂದ ತಿಳಿಯುತ್ತದೆ. ಅಗ್ನಿವೇಶಸಂಹಿತೆಯನ್ನು ಪ್ರತಿ ಸಂಸ್ಕರಿಸಿ ಬರೆದುದಲ್ಲದೆ ಇವರು ಯೋಗಶಾಸ್ತ್ರ ಸಂಬಂಧವಾಗಿಯೂ, ವ್ಯಾಕರಣಶಾಸ್ತ್ರ ಸಂಬಂಧವಾಗಿಯೂ ಮಹದ್ಗ್ರಂಥಗಳನ್ನು ಬರೆದಿರುವುದಾಗಿ ತಿಳಿಯುತ್ತದೆ. ಆಗಿನ ಕಾಲದಲ್ಲಿ ಇವರಿಗೆ ಸರಿದೊರೆಯೆನಿಸುವ ವೈದ್ಯರೇ ಇರಲಿಲ್ಲ. ಇವರ ವಿದ್ಯಾಪ್ರೌಢಿಮೆಯನ್ನು ಅರಿತ ಜನ 'ಇವರು ಸಕಲಶಾಸ್ತ್ರ ಪಾರಂಗತನಾದ ಆದಿಶೇಷನ ಅವತಾರವೆಂದೇ ಕೊಂಡಾಡುತ್ತಿದ್ದರು,' ಚರಕಾಚಾರ್ಯರು ಕ್ರಿಸ್ತಶಕ 300ನೆಯ ಸಂವತ್ಸರದಲ್ಲಿ ತಕ್ಷಶಿಲೆಯಲ್ಲಿನ ಸಕಲವಿದ್ಯಾಕಲಾಶಾಲೆಯಲ್ಲಿ ಕಾಯಚಿಕಿತ್ಸಕರಾಗಿ ಮಹತ್ತರವಾದ ಸೇವೆ ಸಲ್ಲಿಸಿದರಾಗಿ ತಿಳಿಯುತ್ತದೆ ಇವರ ಚರಕಸಂಹಿತೆಯು [ಅರೇಬಿಯಾ, ಲ್ಯಾಟನ್, ಇಂಗ್ಲೀಷ್ ಮೊದಲಾದ ಅನೇಕ ಭಾಷೆಗಳಿಗೆ ತರ್ಜುಮೆಯಾಗಿರುತ್ತದೆ. ಇದರಲ್ಲಿ ಸೂತ್ರಸ್ಥಾನ, ನಿದಾನಸ್ಥಾನ, ವಿಮಾನಸ್ಥಾನ, ಶಾರೀರಸ್ಥಾನ, ಇಂದ್ರಿಯಸ್ಥಾನ, ಚಿಕಿತ್ಸಾಸ್ಥಾನಗಳೆಂಬ ಆರು. ವಿಭಾಗಗಳಿದ್ದು ಕಾಯಚಿಕಿತ್ಸಾಸ್ಥಾನದಲ್ಲಿ ಪ್ರಧಾನವಾದ 120 ಅಧ್ಯಾಯಗಳಿರುತ್ತವೆ ಇದರ ಕೊನೆಯಲ್ಲಿ 17 ಅಧ್ಯಾಯಗಳುಳ್ಳ ಕಲ್ಪಸ್ಥಾನ ಮತ್ತು ಸಿದ್ಧಸ್ಥಾನ ಎಂಬೆರಡು ಸ್ಥಾನಗಳನ್ನು ದೃಢಬಲನೆಂಬುವ ವೈದ್ಯಶ್ರೇಷ್ಠನು ಸೇರಿಸಿ

ಪೂರ್ಣಗೊಳಿಸಿದನೆಂದು ಸಿದ್ಧಿಸ್ಥಾನದ ಕೊನೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಸಿದ್ಧಸ್ಥಾನದ 12 ನೆಯ ಅಧ್ಯಾಯದಲ್ಲಿ ಹೇಳಿರುವ **'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್'** ಎಂದರೆ ಇಲ್ಲಿ ಹೇಳಿರುವುದೇ ಬೇರೆ ಗ್ರಂಥಗಳಲ್ಲಿ ಇರುವುದು—ಆದರೆ ಇಲ್ಲಿ ಹೇಳಲ್ಪಡದ ವಿಷಯ ಬೇರೆಲ್ಲಿಯೂ ಉಲ್ಲೇಖಿಸಲ್ಪಟ್ಟಿಲ್ಲ ವೆಂಬ ಮಾತು ಪೂರ್ಣ ಸತ್ಯವಾಗಿರುತ್ತದೆ.

**12. ದೀವೋದಾಸ** ಇವನು ಕಾಶಿರಾಜನ ಮಗ; ಈತನ ಗುರುಗಳು ಭಾರದ್ವಾಜ ಮಹರ್ಷಿಗಳು. ಈತನು ವೈದ್ಯವಿದ್ಯೆಯಲ್ಲಿ ಮಹಾನಿಪುಣ, ಮಹಾ ಶಾಸ್ತ್ರಜ್ಞ. ಅಲ್ಲದೆ ವೈದ್ಯವಿದ್ಯೆಯು ಶ್ರೀಸಾಮಾನ್ಯರಲ್ಲೂ ಹರಡುವಂತೆ ಬಹುವಾಗಿ ಪ್ರಯತ್ನಿಸಿದ್ದಾನೆ. ಇವನ ವೈದ್ಯ ವಿದ್ಯಾಪ್ರಾವಿಣ್ಯತೆಯನ್ನು ಕಂಡು ಈತನನ್ನು ಧನ್ವಂತರಿಯ ಅಪರಾವತಾರವೇದೇ ಜನರು ಶ್ಲಾಘಿಸುತ್ತಿದ್ದರು. ಇವನುಶಲ್ಯತಂತ್ರ ಮತ್ತು ಶಾಲಾಕ್ಯತಂತ್ರವನ್ನು ಕೂಡಾ ಅಧ್ಯಯನ ಮಾಡಿದುದಲ್ಲದೆ ಇದರ ಪ್ರಚಾರವನ್ನು ಕೂಡ ಮಾಡಿದನು; ಈತನಿಗೆ ಅಪಾರವಾದ ಶಿಷ್ಯವರ್ಗವಿತ್ತು; ಅವರಲ್ಲಿ ಸುಶ್ರುತಾಚಾರ್ಯರೇ ಅಗ್ರಗಣ್ಯರು, ದೀವೋದಾಸನು (ಧನ್ವಂತರಿ) ಔಷಧಪ್ರಯೋಗ, ಕಾಲಜ್ಞಾನ, ಚಿಕಿತ್ಸಾವಿಜ್ಞಾನ, ಚಿಕಿತ್ಸಾಪ್ರದೀಪಿಕಾ, ಚಿಕಿತ್ಸಾಸಾರ, ಯೋಗಚಿಂತಾಮಣಿ, ಯೋಗದೀಪಿಕಾ, ವಿದ್ಯಾಪ್ರಕಾಶ ಚಿಕಿತ್ಸಾ, ಧನ್ವಂತರೀಸಂಹಿತೆಗಳೆಂಬ ಹಲವು ಗ್ರಂಥಗಳನ್ನು ಬರೆದಿರುವನಲ್ಲದೆ ವೈದ್ಯ, ಜ್ಯೋತಿಷ್ಯ, ಯೋಗ ಮೊದಲಾದ ಎಲ್ಲ ಕ್ಷೇತ್ರಗಳಲ್ಲೂ ತನ್ನ ಪ್ರತಿಭೆಯನ್ನು ವ್ಯಕ್ತಪಡಿಸಿರುತ್ತಾನೆ, ಇವನು ತನ್ನ ರಾಜ್ಯಾಡಳಿತದಲ್ಲಿ ನೇರವಾದ ವೈದ್ಯಕೀಯ ಸೇವೆಗೆ ಭಂಗವುಂಟಾಗುವುದೆಂದು ತಿಳಿದು ಕೊನೆಯಲ್ಲಿ ತನ್ನ ಮಗನಾದ ಪ್ರತರ್ದನನಿಗೆ ರಾಜ್ಯವನ್ನು ವಹಿಸಿಕೊಟ್ಟು ತಾನುಅರಣ್ಯದಲ್ಲಿ ವಾನಪ್ರಸ್ಥನನಾಗಿದ್ದು ವೈದ್ಯಕೀಯ ಸೇವೆಯನ್ನು ಜನಸಾಮಾನ್ಯರಿಗೆಲ್ಲ ಸಲ್ಲಿಸುತ್ತಿದ್ದನೆಂದು ತಿಳಿದು ಬರುತ್ತದೆ.

**13. ಸುಶ್ರುತರು**—ಗುರುವಿನಂತೆ ಶಿಷ್ಯ ಎನ್ನುವ ಮಾತು ಸುಶ್ರುತರಿಗೆ ಚೆನ್ನಾಗಿ ಅನ್ವಯಿಸುತ್ತದೆ, ಇವರು ಧನ್ವಂತರಿಯ ಅಪರಾವತಾರವೆಂದು ಕೀರ್ತಿಗೊಂಡ ಕಾಶಿರಾಜನಾದ ದೀವೋದಾಸನ ಶಿಷ್ಯಶ್ರೇಷ್ಠರು. ಇವರು ಅವರೆಗೂ ತ್ರಿಸ್ಕಂದಪದ್ಧತಿ (ಹೇತುಜ್ಞಾನ, ಲಕ್ಷಣಜ್ಞಾನ, ಔಷಧಜ್ಞಾನ) ಯಂತೆ ನಡೆಯುತ್ತಿದ್ದ ಆಯುರ್ವೇದ ಪದ್ಧತಿಯನ್ನು ಅಷ್ಟಾಂಗರೂಪದಿಂದ ಉಪದೇಶಿಸಲು ಆರಂಭಿಸಿದರು, ಇದರಿಂದ ಆಯುರ್ವೇದವು ಜನಸಾಮಾನ್ಯರಲ್ಲೂ ಹರಡಲು ಅವಕಾಶವಾಯ್ತು. ಸುಶ್ರುತರು ವಿಶ್ವಾಮಿತ್ರನ ಮಗನೆಂದು ಕೆಲವು ಗ್ರಂಥಗಳಲ್ಲಿ ಹೇಳಿದರೆ ಇನ್ನು ಕೆಲವುಗಳಲ್ಲಿ ವಿಶ್ವಾಮಿತ್ರನ ಮಗನ ಮಗನೆಂದೂ ಮೊಮ್ಮಗ

ತಿಳಿಸಲಾಗಿದೆ. ಹೀಗೆ ಗುರುಪರಂಪರೆಯಿಂದಲೂ ಮತ್ತು ವಂಶಪರಂಪರೆಯಿಂದಲೂ ಕೂಡ ಸುಶ್ರುತರು ಅತಿಶ್ರೇಷ್ಠರು. ಇವರು ತಮ್ಮ ಹೆಸರಿನಲ್ಲಿ ಸುಶ್ರುತಸಂಹಿತೆ ಎಂದೊಂದು ವೈದ್ಯಗ್ರಂಥವನ್ನು ಬರೆದಿದ್ದಾರೆ. ಈ ಅಷ್ಟಾಂಗ ಯೋಗಯುಕ್ತವಾದ ಪದ್ಧತಿಯನ್ನು ಇವರು ಗುರುಗಳಾದ ದಿವೋದಾಸರಿಂದ ಅಧ್ಯಯನ ಮಾಡಿದ್ದರು ಇದು ಶಲ್ಯತಂತ್ರ ಪ್ರಧಾನವಾದ ಗ್ರಂಥ, ಇದರಲ್ಲಿ 127 ಅಧ್ಯಾಯಗಳಿವೆ. ಇತರ ಎಷ್ಟೋ ಆಯುರ್ವೇದ ಸಂಹಿತೆಗಳಿಗಿಂತಲೂ ಇದರಲ್ಲಿ ಶಸ್ತ್ರಚಿಕಿತ್ಸೆಗೆ ಸಂಬಂಧ ಪಟ್ಟ ಅನೇಕ ವಿಷಯಗಳು ದೊರಕುತ್ತವೆ. ಇದರಲ್ಲಿ ನೂರಕ್ಕಿಂತಲೂ ಹೆಚ್ಚಿನ ಉಕ್ಕಿನ ಶಸ್ತ್ರಗಳ ಲಕ್ಷಣಗಳೂ, ಹೆಸರುಗಳೂ, ನಿರೂಪಿಸಲ್ಪಟ್ಟಿವೆ. ಮಂಡಲಾಗ್ರ ಕರಪತ್ರ, ವೃದ್ಧಿಪತ್ರ, ನಖಶಸ್ತ್ರ, ಮುದ್ರಿಕಾ, ಉತ್ಪಲಪತ್ರಕ ಅರ್ಧಧಾರ, ಸೂಚಿ, ಕುಶಪತ್ರ, ಪತ್ರಾಟೀಮುಖ, ಶರೀರಮುಖ, ಅಂತರ್ಮುಖ ತ್ರಿಕೂರ್ಚಕ, ಕಠಾರಿಕಾ, ವ್ರೀಹಿಮುಖ, ವೇತಸಪತ್ರಕ, ಬಡಿಶ, ದಂತಶಂಕು, ಎಷಣಿ, ಕರ್ಣಿಕಾ, ನೇತ್ರಿಕ ಮೊದಲಾದುವುಗಳು ಹೆಸರೇ ಸೂಚಿಸುವಂತೆ ಬಹುತೀಕ್ಷ್ಣವಾದ ಶಸ್ತ್ರಗಳಾಗಿದ್ದು ಶಸ್ತ್ರಚಿಕಿತ್ಸೆಯಲ್ಲಿ ಬಹಳ ಉಪಯುಕ್ತವಾಗಿದ್ದವು. ಇವುಗಳನ್ನು ಆ ಆಪತ್ಕಾರಕವಾದ ಶಸ್ತ್ರಕ್ರಿಯೆಗಳಲ್ಲೂ ಬಳಸುತ್ತಿದ್ದರು. ಚಿಕ್ಕಪುಟ್ಟವುಗಳಿಗೂ ಉಪಯೋಗಿಸುತ್ತಿದ್ದರು. ಶರೀರ ರಚನಾಶಾಸ್ತ್ರದ ಅಧ್ಯಯನಕ್ಕೆ ಇದಕ್ಕಿಂತಲೂಮಿಗಿಲಾದ ಗ್ರಂಥವು ಆಯುರ್ವೇದದಲ್ಲಿ ಮತ್ತೊಂದಿಲ್ಲ. ಈ ಸುಶ್ರುತ ಸಂಹಿತೆಯು ಅನೇಕ ವಿದೇಶಿಯ ಭಾಷೆಗಳಿಗೂ ತರ್ಜುಮೆಯಾಗಿದೆ. ಸುಶ್ರುತಾಚಾರ್ಯರು ಕಾಶಿನಗರದ ಪ್ರಖ್ಯಾತ ವಿಶ್ವವಿದ್ಯಾಲಯದಲ್ಲಿ ಅಧ್ಯಕ್ಷರಾಗಿದ್ದರು.

೧೪. **ವಾಗ್ಭಟಾಚಾರ್ಯರು**—ಚರಕ, ಸುಶ್ರುತರಂತೆಯೇ ವಾಗ್ಭಟರು ಅತಿ ಪ್ರಾಚೀನ ಕಾಲದವರು. ಆದರೂ ಇವರಿಗೆ ಇವರಿಗಿಂತಲೂ ಹಿಂದಿನವರಾದ ಚರಕ, ಸುಶ್ರುತರ ವೈದ್ಯಗ್ರಂಥಗಳು ಆಧಾರಗ್ರಂಥಗಳು, ಇವರೂ ತಮ್ಮ ಗ್ರಂಥಗಳಲ್ಲಿ ಶಲ್ಯ, ಶಾಲಾಕ್ಯಾದಿ ಅಷ್ಟ ಅಂಗಗಳ ಚಿಕಿತ್ಸೆಯನ್ನೇ ಪ್ರತಿಪಾದಿಸಿದ್ದಾರೆ. ಆದುದರಿಂದಲೇ ಇವರ ಗ್ರಂಥಕ್ಕೆ ಅಷ್ಟಾಂಗಹೃದಯವೆಂಬ ಸಾರ್ಥಕವಾದ ಹೆಸರನ್ನೇ ಕೊಟ್ಟಿದ್ದಾರೆ. ಇವರು ಕ್ರಿಸ್ತಪೂರ್ವ 200 ವರ್ಷಕ್ಕಿಂತಲೂ ಹಿಂದೆಯೇ ಇದ್ದರೆಂದೂ ಮತ್ತು ಧರ್ಮರಾಜನ ಆಸ್ಥಾನದಲ್ಲಿ ಪ್ರಧಾನ ವೈದ್ಯರಾಗಿದ್ದರೆಂದೂ ಹೇಳಲಾಗಿದೆ. ಆದುದರಿಂದಲೇ ಇವರನ್ನು ವೃದ್ಧವಾಗ್ಭಟರೆಂದೇ ಕರೆಯುವ ವಾಡಿಕೆಯುಂಟು. ಇವರು ಅಷ್ಟಾಂಗ ಸಂಗ್ರಹವೆಂಬ ಇನ್ನೊಂದು ಗ್ರಂಥವನ್ನೂ ಬರೆದಿದ್ದಾರೆ. ಆದರೆ ಕೆಲವರ ಅಭಿಪ್ರಾಯದಲ್ಲಿ ಅಷ್ಟಾಂಗ ಹೃದಯವನ್ನು ಬರೆದವರೂ ಮತ್ತು ಅಷ್ಟಾಂಗ ಸಂಗ್ರಹವನ್ನು ಬರೆದವರೂ ಪ್ರತ್ಯೇಕಪ್ರತ್ಯೇಕವೆಂಬ ಅಭಿಪ್ರಾಯವಿದೆ. ಆದರೆ ನನ್ನ ಅಭಿಪ್ರಾಯದಲ್ಲಿ ಬೇರೊಬ್ಬ ವಾಗ್ಭಟನು ಇರುವುದು ನಿಜ, ಇತನು ರಸರತ್ನಸಮುಚ್ಚಯವೆಂಬ ಗ್ರಂಥವನ್ನು ಬರೆದಿದ್ದಾನೆ.

**ಇವನು ಈ ಯುವನು. ವೃದ್ಧವಾಗ್ಭಟ (ಮೇಲಿನ ಅಷ್ಟಾಂಗಹೃದಯ ಮತ್ತು** ಅಷ್ಟಾಂಗ ಸಂಗ್ರಹವನ್ನು ಬರೆದವನು), ಚರಕ, ಸುಶ್ರುತರನ್ನು ಸೇರಿಸಿಯೇ ಲೋಕದಲ್ಲಿ **'ವೃದ್ಧತ್ರಯಿ'** ಎಂದು ಕರೆಯುವ ವಾಡಿಕೆಯುಂಟು. ಈ ಮೂವರ ಗ್ರಂಥಗಳಿಗೂ ಆಯುರ್ವೇದದ ಕ್ಷೇತ್ರದಲ್ಲಿ ಮಹೋನ್ನತವಾದ ಸ್ಥಾನವಿದೆ.

೧೫. **ಮಾಧವಾಚಾರ್ಯ**—ಮಾಧವನಿದಾನವನ್ನು ಮಾಧವಕರ ಎಂಬ ಪಂಡಿತೋತ್ತಮರು ರಚಿಸಿದರೆಂದು ಕೆಲವರು ಹೇಳಿದರೆ ಇನ್ನು ಕೆಲವರು ಅದನ್ನು ಕರ್ನಾಟಕರಾಜ್ಯ ಸ್ಥಾಪಕರಾದ ಹುಕ್ಕಬುಕ್ಕರ ಮಹಾಮಂತ್ರಿಯಾಗಿದ್ದ ಮಾಧವಾಚಾರ್ಯರು ರಚಿಸಿದರೆಂದು ಹೇಳುತ್ತಾರೆ. ಹೀಗೆ ಮಾಧವನಿದಾನದ ಕರ್ತೃಗಳ ವಿಷಯದಲ್ಲೂ ಕಾಲ, ಸ್ಥಳ, ವ್ಯಕ್ತಿಗಳ ಸಂಬಂಧವಾಗಿಯೂ ಮತಭೇದಗಳುಂಟು, ಆದರೆ ಅದನ್ನು ಯಾರೇ ಬರೆದಿರಲಿ, ಮಾಧವನಿದಾನಗ್ರಂಥ ಮತ್ತು ಅದನ್ನು ರಚಿಸಿದ ವ್ಯಕ್ತಿಗಳು ಕೂಡ ಶ್ರೇಷ್ಠರೆಂಬುದರಲ್ಲಿ ಎರಡು ಮಾತಿಲ್ಲ. ಈ ಮಾಧವ ನಿದಾನವನ್ನು ಬರೆದ ಮಹಾವ್ಯಕ್ತಿಯೇ ಭಾಷಾವಿಷಯಕವಾದ ಮಾಧವವೃತ್ತಿ ಎಂಬ ಗ್ರಂಥವನ್ನೂ ಕಾಲಮಾಧವವೆಂಬ ಜ್ಯೋತಿಷ್ಯಗ್ರಂಥವನ್ನೂ, ಮಾಧವ ವೇದಾರ್ಥಪ್ರಕಾಶವೆಂಬ ವೇದಾಂತಗ್ರಂಥವನ್ನೂ, ಬರೆಯುವುದಾಗಿ ತಿಳಿಯುತ್ತದೆ. ಯಾಕೆಂದರೆ ಈ ಎಲ್ಲ ಗ್ರಂಥಗಳ ಭಾಷೆಯಲ್ಲೂ ಸಾಮ್ಯತೆ ಇದೆ. ಅಲ್ಲದೆ ಮಾಧವ ನಿದಾನವು ವೈದ್ಯಕೀಯ ಕ್ಷೇತ್ರದಲ್ಲಿ ರೋಗನಿದಾನಕ್ಕೆ ದಿಗ್ದರ್ಶಕವಾದ ಪ್ರಬಲ ಗ್ರಂಥವಾಗಿದೆ. ಆದುದರಿಂದಲೇ 'ನಿದಾನೇ ಮಾಧವಶ್ರೇಷ್ಠ' ಎಂಬ ಮಾತು ಆಯುರ್ವೇದ ಕ್ಷೇತ್ರದಲ್ಲೇ ಜನಜನಿತವಾಗಿ ನಿಂತಿದೆ. ಚರಕ, ಸುಶ್ರುತ, ವಾಗ್ಭಟರಂತೆಯೇ ಮಾಧವನಿದಾನದ ಕರ್ತೃಗಳಸ್ಥಾನವು ಅತಿ ಉನ್ನತವಾದುದು. ಈ ನಾಲ್ಕುಮಂದಿ ಆಚಾರ್ಯರುಗಳ ಕೃತಿಗಳನ್ನು ಆಳವಾಗಿ ಅಧ್ಯಯನ ಮಾಡದವರು ವೈದ್ಯರೆಂದು ಕರೆಯಿಸಿಕೊಳ್ಳಲು ಯೋಗ್ಯರಲ್ಲವೆಂದು ರೂಢಿಯ ಮಾತಿದೆ. ನನ್ನ ಅಭಿಪ್ರಾಯದಲ್ಲಿ ಮಾಧವಕರ ಮತ್ತು ಮಾಧವಚಾರ್ಯ ಇವರೀರ್ವರೂ ಪ್ರತ್ಯೇಕ ವ್ಯಕ್ತಿಗಳೇ ಮತ್ತು ಇವರ ಕಾಲವೂ ಪ್ರತ್ಯೇಕವೇ.

ಬಹುಶಃ ಈ ಕಾಲದಲ್ಲಿಯೇ ಹಿಂದೆ ಸಾಮಾನ್ಯವಾಗಿ ರೂಢಿಯಲ್ಲಿದ್ದ ರಸ ವೈದ್ಯವು ವ್ಯಾಪಕವಾಗಿ ಆಚರಣೆಯಲ್ಲೂ ಬಂದಂತೆ ಕಾಣುತ್ತದೆ ಹೀಗಾಗಿ ರಸ ವೈದ್ಯದ ನಾಗಾರ್ಜುನ ಪಂಥವು ನಿತ್ಯನಾಥ, ಮಹಾನಂದಿ, ಮತ್ಸ್ಯೇಂದ್ರನಾಥ, ಕಾಪಾಲಿ, ನಾಯಕಿ, ಅಗಸ್ತ್ಯರೇ ಮೊದಲಾದ ಮಹನೀಯರ ಪ್ರಯತ್ನದಿಂದ ಸುಲಭದಲ್ಲಿ ಕೆಲವೇ ಧಾತು ಉಪಧಾತುಗಳನ್ನು ಬಳಸಿ ಅನೇಕ ಘನರೋಗಗಳನ್ನು ಗುಣಪಡಿಸುವ ಚಿಕಿತ್ಸಾಕ್ರಮವು ಪ್ರಚಾರಕ್ಕೆ ಬಂತು, ಅಭ್ರಕ, ಬೆಳ್ಳಿ, ಬಂಗಾರ, ಪಾದರಸ, ಗಂಧಕ ಮೊದಲಾದ ಔಷಧ ದ್ರವ್ಯಗಳನ್ನು ಜಾರಣ ಮಾರಣಾದಿ ಗಳ ಕ್ರಿಯೆಯಿಂದ ಭಸ್ಮ, ಸಿಂಧೂರಗಳಾಗಿ ಪರಿವರ್ತಿಸಿ ಅವುಗಳನ್ನು ರೋಗ

**ಚಿಕಿತ್ಸೆಯಲ್ಲಿ ಬಳಸುವ ಕ್ರಮವು ಈ ಸಿದ್ಧ ವೈದ್ಯದಲ್ಲಿ ಹೇಳಲಾಗಿದೆ. ಈ ವೈದ್ಯರುಗಳಿಗೆ ಹಿಂದೆ ರಾಜಾಶ್ರಯವಿತ್ತು.**

ಮಾಧವರ ನಂತರ ಚಕ್ರಪಾಣಿ (ಚಕ್ರದತ್ತ), ಭಾವಮಿಶ್ರ, ಶಾರ್ಙ್ಗಧರಮಿಶ್ರ, ವಲ್ಲಭೇಂದ್ರಮಿಶ್ರ, ಬಸವರಾಜಪಂಡಿತ, ಬಸವರಾಜರೇ ಮೊದಲಾದ ಅನೇಕ ಘನ ವೈದ್ಯರು ತಮ್ಮ ತಮ್ಮ ಹೆಸರಿನಲ್ಲೇ ಅನೇಕ ವೈದ್ಯಗ್ರಂಥಗಳನ್ನು ರಚಿಸಿರುತ್ತಾರೆ.

೧೬. **ಚಕ್ರದತ್ತ**—ಈತನಿಗೆ ಚಕ್ರಪಾಣಿ ಎಂಬ ಮತ್ತೊಂದು ಹೆಸರೂ ಉಂಟು. ಈತನು ಆವರೆಗೆ ಆಗಿಹೋದ ಚರಕ, ಸುಶ್ರುತ, ವಾಗ್ಭಟರೇ ಮೊದಲಾದವರ ಚಿಕಿತ್ಸೆಗಳನ್ನು ಮಾಧವನಿದಾನದ ಆಧಾರದ ಮೇಲೆ ರಚಿಸಿ ವೈದ್ಯ ಕ್ಷೇತ್ರಕ್ಕೆ ಮಹೋಪಕಾರಮಾಡಿದ್ದಾನೆ. ಈ ಗ್ರಂಥವು ವೈದ್ಯಚಿಕಿತ್ಸೆಯಲ್ಲಿ ಆಧಾರ ಗ್ರಂಥವಾಗಿರುತ್ತದೆ. ಇದು ಚರಕ ಸಂಹಿತೆಗೆ ಬರೆದ ವ್ಯಾಖ್ಯಾನದಂತಿದೆ. ಇದರ ಹೆಸರು 'ಚಿಕಿತ್ಸಾಸಂಗ್ರಹ' ಚಕ್ರದತ್ತಮುಕ್ತಾವಳಿಯು ಈತನ ಇನ್ನೊಂದು ಗ್ರಂಥ. ಚಕ್ರದತ್ತ ಮತ್ತು ಚಕ್ರಪಾಣಿ ಇವರುಗಳು ಬೇರೆ ವ್ಯಕ್ತಿಗಳೆಂದು ಕೆಲವರ ಅಭಿಪ್ರಾಯ. ಆದರೆ ಇದು ತಪ್ಪು. ಇವರಿಬ್ಬರೂ ಒಬ್ಬ ವ್ಯಕ್ತಿಯೇ.

೧೭. **ಶಾರ್ಙ್ಗಧರ**—ಈತನು ರಾಘವದೇವನೆಂಬ ಪಂಡಿತ ಶ್ರೇಷ್ಠನ ಮೊಮ್ಮಗನು ಮತ್ತು ದಾಮೋದರ ಪಂಡಿತನಮಗನು. ಈತನು ಶಾರ್ಙ್ಗಧರಸಂಹಿತೆ ಮತ್ತು ಶಾರ್ಙ್ಗಧರ ಪದ್ಧತಿ ಎಂಬೆರಡು ಗ್ರಂಥಗಳನ್ನು ಬರೆದಿರುತ್ತಾನೆ. ಇದರಲ್ಲಿ ಶಾರ್ಙ್ಗಧರ ಸಂಹಿತೆಯು ವೈದ್ಯಕೀಯ ಗ್ರಂಥವು ಮತ್ತು ಶಾರ್ಙ್ಗಧರ ಪದ್ಧತಿಯು ಸುಭಾಷಿತವು. ಶಾರ್ಙ್ಗಧರ ಸಂಹಿತೆಯಲ್ಲಿ ಇಪ್ಪತ್ತು ಅಧ್ಯಾಯಗಳಿದ್ದು ಇದುಬಹು ಉಪಯುಕ್ತವಾದ ಗ್ರಂಥವಾಗಿರುತ್ತದೆ. ಇದರಲ್ಲಿ ಶಾರೀರಕ ಪರಿಚಯವು ಅಷ್ಟಾಗಿ ಉಲ್ಲೇಖಿಸಿಲ್ಲವಾದರೂ ಔಷಧಿ ಪ್ರಯೋಗಗಳನ್ನು ಚೆನ್ನಾಗಿ ಸಂಗ್ರಹಿಸಿ ಹೇಳಲಾಗಿದೆ. ಶಾರ್ಙ್ಗಧರನಿಗೆ ಶಾರ್ಙ್ಗಧರ ಮಿಶ್ರನೆಂಬ ಇನ್ನೊಂದು ಹೆಸರೂ ಉಂಟು.

೧೮. **ಭಾವಮಿಶ್ರ**—ಈತನು ಭಾವಪ್ರಕಾಶವೆಂಬ ವೈದ್ಯಗ್ರಂಥವನ್ನು ಬರೆದಿರುತ್ತಾನೆ. ಇದರಲ್ಲಿ ಬಹುತೇಕ ಈತನಿಗಿಂತ ಹಿಂದೆ ಆಗಿಹೋದವೈದ್ಯಶ್ರೇಷ್ಠರ ವೈದ್ಯಗ್ರಂಥಗಳ ಅನುಭವಗಳನ್ನೇ ಸಂಗ್ರಹರೂಪವಾಗಿ ಆರಿಸಿಕೊಂಡಿರುತ್ತಾನೆ. ಆದುದರಿಂದಲೇ ಈತನ ವೈದ್ಯಕೀಯ ಗ್ರಂಥವು ಸರ್ವರ ಆದರಣೆಗೆ ಪಾತ್ರವಾಗಿದೆ. ಈತನು ಕಾಶಿಯಲ್ಲಿ ಅನೇಕ ಮಂದಿ ವಿದ್ಯಾರ್ಥಿಗಳನ್ನಿಟ್ಟುಕೊಂಡು ವೈದ್ಯಶಿಕ್ಷಣ ವನ್ನು ನೀಡುತ್ತಿದ್ದನೆಂದು ತಿಳಿದುಬರುತ್ತದೆ. ಈತನ ಭಾವಪ್ರಕಾಶನಿಘಂಟು ಅತ್ಯಮೋಘವಾದ ಒಂದು ಕೃತಿರತ್ನ. ಇದರಲ್ಲಿ ಆಯುರ್ವೇದಕ್ಕೆ ಸಂಬಂಧಪಟ್ಟ ಎಲ್ಲ ಗಿಡಮೂಲಿಕೆಗಳ ಮತ್ತು ಧಾತು ಉಪಧಾತುಗಳ ಗುಣಧರ್ಮಗಳೂ ನಿರೂಪಿಸಲ್ಪಟ್ಟಿವೆ. ಔಷಧ ದ್ರವ್ಯಗಳ ಸಂಬಂಧಪಟ್ಟ ಮಾಹಿತಿಯು ಇದರಲ್ಲಿ ಚೆನ್ನಾಗಿ ಸಂಗ್ರಹಿಸಲ್ಪಟ್ಟಿವೆ. ಆ ಮೇಲಿನವರೆಲ್ಲರ ಪರಂಪರೆಯಲ್ಲೆ ಈಗಲೂ

ತಜ್ಞವೈದ್ಯರು (ಆಚಾರ್ಯರು) ಗಳಿಸಿದ್ದಾರೆಂದರೆ ಇದರಲ್ಲಿ ಅತಿಶಯೋಕ್ತಿ ಏನೂ ಇಲ್ಲ ಆದರೆ ಸಮಾಜ ಸರಕಾರ ಅವರನ್ನು ಗುರುತಿಸುವ ಗೋಜಿಗೇ ಹೋಗಿಲ್ಲ. ಇದೆಂತಹ ವಿಪರ್ಯಾಸ !

ಈಗಿನ್ನು ಪುಸ್ತಕ ಪ್ರಕಟಣೆಯ ವಿಚಾರ. ಇಂದು ಪ್ರತಿಯೊಂದು ವಸ್ತುವಿನ ಬೆಲೆಯೂ ನಿಮಿಷ ನಿಮಿಷಕ್ಕೂ ಕರಿನಾಗರದ ವಿಷದಂತೆ ಏರತೊಡಗಿದೆ: ಇದರಲ್ಲಿ ಮುದ್ರಣದ ಕಾಗದವೂ ಸೇರಿದೆ. ಆದರೆ ಬೆಲೆ ಕಡಿಮೆಯಾಗಿರುವುದೆಂದರೆ ಮನುಷ್ಯನದು ಮಾತ್ರ. ಹೀಗಾಗಿ ನಾವು ಎಷ್ಟೇ ಪ್ರಯತ್ನಿಸಿದರೂ ಸಕಾಲದಲ್ಲಿ ಸರಕಾರದಿಂದ ರಿಯಾಯ್ತಿ ಬೆಲೆಯ ಕಾಗದ ದೊರಕದೆ ಕೊನೆಯಲ್ಲಿ ಹೆಚ್ಚಿನ ಬೆಲೆತೆತ್ತೇ ಕಾಗದವನ್ನು ಕೊಳ್ಳಬೇಕಾಯ್ತು. ಒಂದೊಮ್ಮೆ ಇದೊಂದೇ ಪುಸ್ತಕದ ಮುದ್ರಣವಾಗಿದ್ದರೆ ಯೋಚನೆ ಇರಲಿಲ್ಲ. ಆದರೆ ಒಂದೇಕಾಲಕ್ಕೆ ನಮ್ಮ ಅನೇಕ ಗ್ರಂಥಗಳು ಪುನರ್ಮುದ್ರಣಕ್ಕೆ ಬಂದಿವೆ. ಮತ್ತೆ ಕೆಲವು ಇಂಗ್ಲೀಷಿಗೆ ಭಾಷಾಂತರವಾಗಿ ಅಚ್ಚಿಗಾಗಿ ಸಿದ್ಧವಾಗಿವೆ. ಸ್ವಯಂವೈದ್ಯದ ಮೊದಲನೇ ಮುದ್ರಣ ಪ್ರತಿಗಳಂತೂ ಮೂರೇತಿಂಗಳುಗಳಲ್ಲಿ ಮುಗಿಯುತ್ತ ಬಂದು ಪುನರ್ಮುದ್ರಣವಾಗಬೇಕಾಗಿದೆ. ಇಂತಹ ಸಂದರ್ಭದಲ್ಲಿ ನಾವು ಸರಕಾರವನ್ನು ವಿನೀತಭಾವದಿಂದ ನಮ್ಮೆಲ್ಲ ಪುಸ್ತಕಗಳಿಗೆ ಬೇಕಾಗುವ ಕಾಗದವನ್ನು ರಿಯಾಯ್ತಿ ದರದಲ್ಲಿ ಒದಗಿಸಿಕೊಡಿರೆಂದು ಪ್ರಾರ್ಥಿಸುತ್ತ **" ವನೌಷಧಿಗಳ ಗುಣಧರ್ಮ ಮತ್ತು ವಿವಿಧ ಶಬ್ದಕೋಶ "** ವೆಂಬ ಈ ಗ್ರಂಥವನ್ನು ಜನತೆಯ ಮುಂದಿಡುತ್ತಿದ್ದೇವೆ. ಇದರ ಪ್ರಕಟಣೆಯ ಹೊಣೆಯನ್ನು ಹೊತ್ತ ಅನಾಥಸೇವಾಶ್ರಮಕ್ಕೆ ವಂದನೆಗಳು. ಅಲ್ಲದೆ ಇದರ ಮುದ್ರಣ ಕಾಲದಲ್ಲಿ ಸೂಕ್ತ ಸಲಹೆಯನ್ನಿತ್ತು ಸಹಕರಿಸಿದ ಶ್ರೀ ಸಂಗುರುದಾಸ್‌ಜಿಯವರಿಗೂ ಶ್ರೀ ಸತ್ಯಾನಂದಜೀಯವರಿಗೂ ಚಿರಕೃತಜ್ಞತೆಗಳು. ಹಿಂದಿನಂತೆ ಇಂದೂ ನನ್ನ ಕೈಬರಹದ ಕರಡನ್ನು ನಕಲುಮಾಡಿ ಅಚ್ಚಿಗೆ ಸಿದ್ಧಗೊಳಿಸುವದಲ್ಲದೆ ಮುದ್ರಣದ ದೋಷವನ್ನು ತಿದ್ದಿ ಗ್ರಂಥವು ಪ್ರಕಟಣೆಯಾಗುವವರೆಗೂ ದುಡಿದ ಕುಮಾರಿ ವನಿತಳಿಗೂ ಮತ್ತು ಅಚ್ಚುಕೂಟದ ಕೆಲಸಗಾರರಿಗೂ ಕೂಡ ನನ್ನ ಅನಂತ ಆಶೀರ್ವಾದಗಳು. ಈ ಮೊದಲೆ ತಿಳಿಸಿರುವಂತೆ ಇದು ನನ್ನ ಸ್ವಯಂವೈದ್ಯ ಗ್ರಂಥದಲ್ಲೇ ಪ್ರಕಟಿಸಲು ಬರೆದ ವಸ್ತುವಾಗಿತ್ತು. ಆದುದರಿಂದ ಇದು ತೀರ ಆವಶ್ಯಕವಾಗಿದೆ; ಆದರೆ ಇಷ್ಟರಿಂದಲೇ ನನಗೆ ತೃಪ್ತಿ ಇಲ್ಲ. ಈ ವಿಷಯಕ್ಕೆ ಸಂಬಂಧಪಟ್ಟೊಂದು ಬೃಹದ್ಗ್ರಂಥವನ್ನೇ ಬರೆಯಬೇಕೆಂಬ ಹಂಬಲವಿದೆ. ಅಷ್ಟೇ ಅಲ್ಲ. ಆಯುರ್ವೇದಕ್ಕೆ ಸಂಬಂಧಪಟ್ಟ ಇನ್ನೂ ಹಲವು ಗ್ರಂಥಗಳನ್ನು ಬರೆಯುವ ಯೋಜನೆ ತಲೆಯಲ್ಲಿದೆ. ಈ ನನ್ನ ಸೇವೆಯನ್ನು ಶ್ರೀ ಗುರುವೂ ಮತ್ತು ಜನತಾರೂಪಿ ಜನಾರ್ದನರೂ ನಡೆಯಿಸಿಕೊಳ್ಳಲಿ ಎಂದು ಹಾರೈಸುತ್ತಾ ಈ ಪ್ರವೇಶವನ್ನು ಮಂಗಲಗೊಳಿಸುತ್ತೇನೆ.

ತಮ್ಮೆಲ್ಲರ ನಮ್ರ ಬಂಧು,

**ತಿರುಕ.**

# ದ್ವಿತೀಯ ಮುದ್ರಣ

ಜನತೆಯ ಪ್ರೀತಿಯಿಂದಾಗಿ "ವನೌಷಧಿಗಳ ಗುಣಧರ್ಮ ಮತ್ತು ವಿವಿಧ ಶಬ್ದಕೋಶದ" ಮೊದಲ ಮುದ್ರಣದ ಪ್ರತಿಗಳು ಮುಗಿದು ಬಹಳ ಕಾಲವಾಯಿತು. ಆದರೂ ಅದರ ಬೇಡಿಕೆ ಮಾತ್ರ ಕುಗ್ಗಲಿಲ್ಲವಾಗಿ ಮತ್ತೆ ಈ ತುಟ್ಟಿಯಲ್ಲೂ ಅದರ ಎರಡನೇ ಆವೃತ್ತಿಯನ್ನು ಅನಾಥಸೇವಾಶ್ರಮ ವಿಶ್ವಸ್ತ ಸಮಿತಿಯು ಹೊರತರುತ್ತಿದೆ. ಇದರ ಮೇಲ್ಮೆಗಾಗಿ ದುಡಿದ ಶ್ರೀ ಸೂರುದಾಸರಿಗೂ ಕರಡಚ್ಚನ್ನು ತಿದ್ದಿದ ಶ್ರೀ ಕೃಷ್ಣಮೂರ್ತಿ ಪಂಡಿತರು ಮತ್ತು ಚಿ|| ವನಿತಾ ಅವರಿಗೂ ನನ್ನ ಹೃತ್ಪೂರ್ವಕ ಆಶೀರ್ವಾದಗಳು. ಎಂದಿನಂತೆ ನನ್ನ ಗ್ರಂಥಗಳನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಸರ್ವೋದಯ ಮುದ್ರಣಾಲಯದ ಸಿಬ್ಬಂದಿ ವರ್ಗದವರಿಗೂ ಆಶೀರ್ವಾದಗಳು.

ತಮ್ಮೆಲ್ಲರ ನಮ್ರ ಬಂಧು,
**ತಿರುಕ.**

# ತೃತೀಯ ಮುದ್ರಣ

ಇಂದಿನ ದಿನಗಳಲ್ಲಿ ಕಾಗದದ ಬೆಲೆ ಏರಿಕೆಯಿಂದ ಪುಸ್ತಕಗಳನ್ನು ಮುದ್ರಿಸುವುದು ತೀರ ಕಷ್ಟವಾಗಿದೆ. ಆದರೂ ಜನರ ಬೇಡಿಕೆಯನ್ನು ಈಡೇರಿಸಲೇ ಬೇಕಾಗಿರುವುದರಿಂದ ಪುನರ್ಮುದ್ರಣ ಅನಿವಾರ್ಯ. ಹೀಗಾಗಿ ನಮ್ಮ ಆರ್ಥಿಕ ಮುಗ್ಗಟ್ಟನ್ನೆಲ್ಲ ಬದಿಗೊತ್ತಿ ಈ "ವನೌಷಧಿಗಳ ಗುಣಧರ್ಮ ಮತ್ತು ವಿವಿಧ ಶಬ್ದಕೋಶದ" ತೃತೀಯ ಮುದ್ರಣವನ್ನು ಪ್ರಕಟಿಸುತ್ತಿದ್ದೇವೆ. ಎಂದಿನಂತೆ ಇದರ ಮುದ್ರಣ ಮತ್ತು ಪ್ರಕಟಣೆಯಲ್ಲಿ ನೆರವಾದ ಮಹನೀಯರಿಗೆ ನನ್ನ ಅನಂತ ಧನ್ಯವಾದಗಳು.

ತಮ್ಮೆಲ್ಲರ ನಮ್ರ ಬಂಧು,
**ತಿರುಕ.**

# ವನೌಷಧಿಗಳಗುಣಧರ್ಮ

1. **ಅಳಲೇಕಾಯಿ**—ಇದು ಮೃದುವಿರೇಚನಕಾರಿ; ಬಾವು, ಶೋಥೆಗಳನ್ನು ಇಳಿಸುತ್ತದೆ; ಕಫಘ್ನವೂ ಹೌದು. ಪಿತ್ತವನ್ನು ನಿವಾರಿಸಿ, ಚರ್ಮರೋಗಗಳನ್ನು ಪರಿಹರಿಸಿ ಅಗ್ನಿದೀಪನವನ್ನುಂಟುಮಾಡುತ್ತದೆ. ರಸಾದಿಧಾತುಗಳನ್ನುವೃದ್ಧಿಪಡಿಸುವ ಶಕ್ತಿ ಇದಕ್ಕಿರುವುದರಿಂದ ವನೌಷಧಿಗಳಲ್ಲಿ ಇದಕ್ಕೆ ಶ್ರೇಷ್ಠ ಸ್ಥಾನವಿದೆ.

ಇದರಲ್ಲಿ ಬಾಲಹರೀತಕೀ ಎಂಬ ಇನ್ನೊಂದು ಜಾತಿಯೂ ಇದೆ. ಇದರ ಹೆಚ್ಚಿನ ಗುಣಧರ್ಮಗಳು ಅದೇ ಆದರೂ ಮೂಲವ್ಯಾಧಿ: ಗುಲ್ಮಗಳೇ ಮೊದಲಾದ ಕೆಲವೊಂದು ವ್ಯಾಧಿಗಳ ಮೇಲೆ ಇದು ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತದೆ. ಇದನ್ನು ಚೂರ್ಣರೂಪವಾಗಿಯೂ. ಕಷಾಯರೂಪವಾಗಿಯೂ ಉಪಯೋಗಿಸುವ ರೂಢಿಯಿದೆ. ಚೂರ್ಣವನ್ನು ಹೊತ್ತಿಗೆ ಕಾಲುತೊಲೆಯಿಂದ ಅರ್ಧ ತೊಲೆಯವರೆಗೆ ಕೊಡುವುದು ಸಾಮಾನ್ಯನಿಯಮ; ಅನುಪಾನಕ್ಕೆ ಜೇನು ಅಥವಾ ಬಿಸಿನೀರು ಕಷಾಯವಾದರೆ 2 ರಿಂದ 4 ಚಮಚೆಯವರೆಗೆ ಕೊಡಬೇಕು,

2. **ಅತಿಬಜೆ**—ಇದು ದೀಪನಕಾರಿ, ಜ್ವರಘ್ನ ಮತ್ತು ಗ್ರಾಹಿ: ಅಜೀರ್ಣವನ್ನು ಪರಿಹರಿಸಿ ಹಸಿವೆಯನ್ನು ಹೆಚ್ಚಿಸುತ್ತದೆ. ಕಟುಪೌಷ್ಟಿಕವಾಗಿರುವುದರಿಂದ ಅತಿಸಾರ, ಸಂಗ್ರಹಣಿಗಳನ್ನು ಗುಣಪಡಿಸುತ್ತದೆ. ಚಿಕ್ಕಮಕ್ಕಳ ಮತ್ತು ಬಾಣಂತಿಯರ ಭೇದಿಗಳಲ್ಲಿ ಬಹು ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ಪ್ರಮಾಣ 3 ರಿಂದ 5 ಗುಂಜಿ, ಅನುಪಾನಕ್ಕೆ ಜೇನು.

3. **ಅತಿಮಧುರ**—ಇದು ಮಧುರರಸವುಳ್ಳದ್ದಾಗಿ ಶಾಮಕಗುಣದಿಂದ ಕೂಡಿರುತ್ತದೆ. ಕ್ರಿಮಿಹರ, ಮೂತ್ರಲ, ಕಫ ಶಾಮಕಗುಣಗಳುಳ್ಳ ಅತಿಮಧುರವು ಶ್ವಾಸನಾಳದದಾಹ, ಕಾಸ. ಗಂಟಲುನೋವು. ಕ್ಷಯ. ಅಪಸ್ಮಾರ ಮತ್ತುಹೊಟ್ಟೆಯ ವ್ಯಾಧಿಗಳ ಮೇಲೂ ಸತ್ಪರಿಣಾಮವನ್ನುಂಟುಮಾಡುತ್ತದೆ. ಪ್ರಮಾಣ; ಹೊತ್ತಿಗೆ 15ರಿಂದ 30 ಗುಂಜಿಯವರೆಗೆ ದಿನದಲ್ಲಿ 2, 3 ಬಾರಿ ಚೂರ್ಣರೂಪದಲ್ಲಿಯಾಗಲೀ ಅಥವಾ ಕಷಾಯರೂಪದಲ್ಲಿಯಾಗಲಿ ಕೊಡಬಹುದು. ಅನುಪಾನ-ಜೇನು ಹಾಲು, ತುಪ್ಪ, ಸಕ್ಕರೆ ಇವುಗಳಲ್ಲಿ ಯಾವುದಾದರೊಂದು.

4. **ಅಮೃತ ಬಳ್ಳಿ**—ಇದು ಕಹಿ, ಒಗರು ಗುಣಗಳಿಂದ ಕೂಡಿದ್ದು ವಿಪಾಕದಲ್ಲಿ ಮಧುರತೆಯನ್ನು ಹೊಂದುತ್ತದೆ. ಇದು ಅಗ್ನಿವರ್ಧಕ, ಪಾಚಕ

ಮತ್ತು ಪಿತ್ತ ಶಾಮಕವೂ ಆಗಿದೆ. ಜ್ವರಹರ, ವೀರ್ಯವರ್ಧಕ, ಪೌಷ್ಟಿಕವೂ ಈ ಮೂಲಿಕೆಯು ಚರ್ಮವ್ಯಾಧಿ ಪರಿಹಾರಕವೂ, ಮೂತ್ರರೋಗ ನಿವಾರಕವೂ ಹೌದು. ಅಮೃತಬಳ್ಳಿಯನ್ನು ಸ್ವರಸ, ಚೂರ್ಣ, ಕಷಾಯಗಳಲ್ಲಿ ಔಷಧಕ್ಕೆ ಉಪಯೋಗಿಸುವ ಕ್ರಮವಿದೆ. ಔಷಧಕ್ಕೆ ಎಳೆಯದಾದ ತೆಳ್ಳಗಿನ ಬಳ್ಳಿಯನ್ನು ಉಪಯೋಗಿಸುವುದಕ್ಕಿಂತಲೂ ದಪ್ಪನಾಗಿರುವ ಬಲಿತ ಹಳೆಯ ಹಂಬನ್ನು ಉಪಯೋಗಿಸುವುದು ಉತ್ತಮ: ಅಲ್ಲದೇ ಹಳೆಯ ಬೇವಿನ ಮರಕ್ಕೆ ಹಬ್ಬಿರುವ ಬಳ್ಳಿಯು ಇನ್ನೂ ಶ್ರೇಷ್ಠ. ಸ್ವರಸ ಅಥವಾ ಕಷಾಯವಾದರೆ ಹೊತ್ತಿಗೆ 4–6 ಚಮಚ ಚೂರ್ಣವಾದರೆ ಅರ್ಧದಿಂದ 1 ತೊಲ ಮತ್ತು ಸತ್ವವಾದರೆ 10 ರಿಂದ 20 ಗುಂಜ ಯವರೆಗೂ ತೆಗೆದುಕೊಳ್ಳಬಹುದು. ಅನುಪಾನಕ್ಕೆ ಜೇನುತುಪ್ಪ, ಕಲ್ಲುಸಕ್ಕರೆ ತುಪ್ಪ ವಗೈರೆ.

**5. ಅತ್ತಿ**—ಇದು ಮಧುರವೂ, ಶೀತವೂ, ಸ್ತಂಭಕವೂ, ಮತ್ತು ರಕ್ತ ರಜ ವೀರ್ಯಗಳ ವೃದ್ಧಿಕಾರವೂ ಆಗಿರುತ್ತದೆ. ರಕ್ತಪಿತ್ತ ಅತಿಸಾರಗಳನ್ನು ಪರಿಹರಿಸಿ ಉಷ್ಣವನ್ನು ಶಮನಗೊಳಿಸುತ್ತದೆ. ಇದರ ಹಣ್ಣು, ತೊಗಟೆ, ಹಾಲುಗಳೆಲ್ಲವೂ ಔಷಧರೂಪದಲ್ಲಿ ಉಪಯೋಗಕ್ಕೆ ಬರುತ್ತವೆ. ಇದು ಕಫಹಾರಕವೂ ಹೌದು ಕಣ್ಣಿಗೆ ತಂಪನ್ನುಂಟುಮಾಡುತ್ತದೆ. ತೊಗಟೆಯನ್ನಾದರೆ ಅರ್ಧದಿಂದ ಒಂದು ತೊಲೆಯವರೆಗೆ, ಹಣ್ಣನ್ನಾದರೆ 3–4 ಹಣ್ಣಿನವರೆಗೂ ಮತ್ತು ಹಾಲನ್ನಾದರೆ 2–3 ಚಮಚೆಯವರೆಗೂ ಸಕ್ಕರೆ ಹಾಲುಗಳ ಅನುಪಾನದಲ್ಲಿ ಕೊಡಬಹುದು.

**6. ಅರಳಿ**—ಇದು ಒಗರು ಮತ್ತು ಸಿಹಿರಸಗಳಿಂದ ಕೂಡಿದ್ದು, ಕಫ ಹರವೂ, ಪಿತ್ತನಾಶಕವೂ ಮತ್ತು ರಕ್ತಶೋಧಕವೂ ಕೂಡ ಆಗಿರುತ್ತದೆ. ಬಲ್ಯವೂ, ಪೌಷ್ಟಿಕವೂ, ವೀರ್ಯವರ್ಧಕವೂ ಆದ ಅಶ್ವತ್ಥವು ಶರೀರಕ್ಕೆ ಕಾಂತಿಯನ್ನೂ, ಶಕ್ತಿಯನ್ನು ಕೂಡ ಉಂಟುಮಾಡುತ್ತದೆ. ಇದರ ಬೇರು, ಕಾಂಡ, ತೊಗಟೆ, ಎಲೆ, ಹಣ್ಣು, ಕಾಯಿ, ಹಾಲು, ಪ್ರತಿಯೊಂದೂ ಔಷಧಕ್ಕೆ ಬರುತ್ತದೆ. ಇದನ್ನು ಚೂರ್ಣ, ಕಷಾಯಗಳ ರೂಪದಲ್ಲಿ ಉಪಯೋಗಿಸುವ ಕ್ರಮವಿದೆ. ಪ್ರಮಾಣ–ಹೊತ್ತಿಗೆ ಕಾಲುತೊಲೆಯಿಂದ ಅರ್ಧತೊಲೆಯವರೆಗೆ ದಿವಸಕ್ಕೆ 2–3 ವೇಳೆ ಅನುಪಾನ–ಹಾಲು, ಸಕ್ಕರೆ, ಜೇನು.

**7. ಅರಸಿನ**—ಇದು ಒಗರು ಮತ್ತು ಕಾರರಸ ಗುಣವುಳ್ಳದ್ದಾಗಿರುತ್ತದೆ. ಇದು ಉಷ್ಣ, ಕಫಘ್ನ, ಕ್ರಿಮಿಘ್ನ, ಶೋತಘ್ನ ಗುಣಗಳಿಂದ ಕೂಡಿದ್ದು ರಕ್ತಗತವಾದ ದೋಷ, ವ್ರಣ, ಶೋಥೆ, ಪ್ರಮೇಹ, ಪಾಂಡು, ಕಾಮಾಲೆ, ನೆಗಡಿ, ಪೀನಸಗಳನ್ನೂ ಪರಿಹರಿಸುವ ಶಕ್ತಿವುಳ್ಳದಾಗಿರುತ್ತದೆ. ಇದನ್ನು ಶರೀರದ ಒಳಗೂ, ಹೊರಗೂ ಕೂಡ ಉಪಯೋಗಿಸುವ ರೂಢಿಯಿದೆ. ಇದರ ಹಸಿಯ ಅಥವಾ ಒಣಗಿದ ಬೇರನ್ನು ಔಷಧಕ್ಕಾಗಿ ಉಪಯೋಗಿಸುವ ಕ್ರಮವಿದೆ. ಹೊತ್ತಿಗೆ

5 ರಿಂದ 15 ಗುಂಜಿಯವರಗೆ ದಿನಕ್ಕೆರಡುವೇಳೆ ಹಾಲು, ಸಕ್ಕರೆ, ಬೆಣ್ಣೆ, ತುಪ್ಪಗಳ ಅನುಪಾನದಲ್ಲಿ ಹೊಟ್ಟೆಗೆ ಕೊಟ್ಟರೆ, ಹೊರಗೆ ಲೇಪನಕ್ಕೆ ತಣ್ಣೀರು, ತಂಡುಲೋದಕ. ಬೆಣ್ಣೆ, ಲಿಂಬೆಯ ರಸಗಳಲ್ಲಿ.

**8. ಅಜವೋದ**(ದೊಡ್ಡ ಓಮು)—ಇದು ಅಮಾಚಕ, ಸ್ತಂಭಕ, ಗ್ರಾಹಿ, ಜಠರಾಗ್ನಿಪ್ರದೀಪಕ ಮತ್ತು ದಾಹದಾಯಕ ಗುಣಗಳಿಂದ ಕೂಡಿರುತ್ತದೆ. ಇದಕ್ಕೆ ವೀರ್ಯವರ್ಧಕ, ಬಲದಾಯಕ, ಕ್ರಿಮಿನಾಶಕ, ಶೂಲ ಪರಿಹಾರಕ ಸಾಮರ್ಥ್ಯವಿದ್ದು ಇದರಿಂದ ಕಣ್ಣು, ಹಲ್ಲುಗಳ ಶೂಲೆಯೂ, ಗುಲ್ಮವಾಂತಿಗಳ ನಿವಾರಣೆಯೂ ಕೂಡ ಉಂಟಾಗುತ್ತದೆ. ಪ್ರಸವಾನಂತರ ಬಾಣಂತಿಯರಿಗೆ ಉಂಟಾಗುವ ಗರ್ಭಾಶಯದ ಅಶಕ್ತತೆಯು ಇದರಿಂದ ನಿವಾರಣೆಯಾಗಿ ಅವರಿಗೆ ಹಸಿವೆಯನ್ನೂ, ಶಕ್ತಿಯನ್ನೂ ಉಂಟುಮಾಡುತ್ತದೆ. ವಾತ, ಶೀತಗಳ ಬಾಧೆಯನ್ನು ಪರಿಹರಿಸುವ ಶಕ್ತಿಯೂ ಅಜವೋದಕ್ಕಿದ್ದು, ಇದು ಜ್ವರಘ್ನವೂ ಹೌದು. ಅಜವೋದವನ್ನು ಚೂರ್ಣ ಅಥವಾ ಕಷಾಯಗಳ ರೂಪದಲ್ಲಿ ಕೊಡುವ ವಾಡಿಕೆಯುಂಟು. ಹೊತ್ತಿಗೆ 5 ರಿಂದ 10 ಗುಂಜಿಯವರೆಗೆ ಬಿಸಿನೀರು, ಜೇನು, ಮಜ್ಜಿಗೆಗಳ ಅನುಪಾನವನು ಹೇಳಿದೆ. ಇದರಲ್ಲೇ ಅಜವಾನ ಅಥವಾ ಸಣ್ಣ ಓಮವೆಂಬ ಇನ್ನೊಂದು ಜಾತಿಯೂ ಉಂಟು. ಆದರೆ ಇವುಗಳೆರಡರ ಗುಣವೀರ್ಯಗಳೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ಇರುವುದರಿಂದ ಅದನ್ನಿಲ್ಲಿ ಪ್ರತ್ಯೇಕವಾಗಿ ಕೊಟ್ಟಿಲ್ಲ.

**9. ಅಶ್ವಗಂಧಿ—**(ಹಿರೇಮದ್ದು) ಇದು ಒಗರು ಮತ್ತು ಸ್ವಲ್ಪ ಕಹಿಯಾಗಿದ್ದು ವಿಪಾಕದಲ್ಲಿ ಕಾರವಾಗಿಯೂ, ಲಘುವಾಗಿಯೂ, ಉಷ್ಣವೀರ್ಯವುಳ್ಳದ್ದಾಗಿಯೂ ಇರುತ್ತದೆ. ಅಲ್ಲದೆ ಇದು ಅತ್ಯಂತ ವೀರ್ಯವರ್ಧಕವೂ, ರಸಧಾತುಗಳ ಪೋಷಕವೂ, ಕಾಂತಿದಾಯಕವೂ ಮತ್ತು ಪುಷ್ಟಿದಾಯಕವೂ ಕೂಡ ಆಗಿರುತ್ತದೆ. ವೃದ್ಧಾಪ್ಯದಲ್ಲಿ ಬರತಕ್ಕ ಎಲ್ಲ ರೋಗಗಳನ್ನೂ ಮತ್ತು ಕೆಮ್ಮು, ದಮ್ಮು, ಕ್ಷಯ, ವಾತ, ಶೋಭೆ, ರಕ್ತದೋಷ, ವಿಷಕ್ರಿಮಿ, ತೊನ್ನು, ವ್ರಣ ಮೊದಲಾದುವುಗಳನ್ನೂ ಗುಣಪಡಿಸತಕ್ಕ ಸಾಮರ್ಥ್ಯ ಇವರಲ್ಲಿರುತ್ತದೆ. ಆದುದರಿಂದಲೇ ಹಳ್ಳಿಗಾಡಿನಲ್ಲಿ ಗೊತ್ತಿಲ್ಲದ ವ್ಯಾಧಿಗೆ 'ಹಿರೇಮದ್ದು' ಎಂಬೋದು ವಾಡಿಕೆಯ ಮಾತು ರೂಢಿಯಲ್ಲಿದೆ. ಹಿರೇಮದ್ದನ್ನು ಒಂದು ವರ್ಷದವರೆಗೆ ಬಿಡದೆ ಸೇವಿಸಿದರೆ ಎಂತಹ ರೋಗವನ್ನಾದರೂ ತಡೆಯುವ ಶಕ್ತಿಯುಂಟಾಗುತ್ತದೆಯಲ್ಲದೆ ಮುಪ್ಪನ್ನೂ ಗೆಲ್ಲುವ ಶಕ್ತಿಯನ್ನುಂಟುಮಾಡುತ್ತದೆ. ಹಿರೇಮದ್ದಿನಲ್ಲಿ ದಪ್ಪ ಜಾತಿಯ ಬೇರಿನವುಗಳು, ಮತ್ತು ತೆಳ್ಳನೆಯ ಜಾತಿಯ ಬೇರಿನವುಗಳೆಂದು ಎರಡು ಭೇದಗಳುಂಟು. ಈ ಎರಡರ ಗುಣಧರ್ಮಗಳೂ ಒಂದೇ ಇದ್ದು ದಪ್ಪನೆಯ ಬೇರಿನವು ದಕ್ಷಿಣಪ್ರಾಂತಗಳಲ್ಲೂ, ಸಣ್ಣನೆಯ ಬೇರಿನವು ಉತ್ತರ ಪ್ರಾಂತಗಳಲ್ಲೂ ಬೆಳೆಯುತ್ತವೆ. ಇವುಗಳ ಬೇರು

ಗಳನ್ನು ಹಸುವಿನ ಹಾಲಿನಲ್ಲಿ ಬೇಯಿಸಿ ಒಣಗಿಸಬೇಕೆಂದಿದೆ. ಇದನ್ನು ಚೂರ್ಣ ರೂಪದಲ್ಲಿ ಉಪಯೋಗಿಸುವ ಪದ್ಧತಿಯುಂಟು. ಕಾಲುತೊಲೆಯಿಂದ ಅರ್ಧ ತೊಲೆಯವರೆಗಿನ ಪ್ರಮಾಣದಲ್ಲಿ ಜೇನುತುಪ್ಪ, ತುಪ್ಪ, ಸಕ್ಕರೆ, ಹಾಲುಗ ಅನುಪಾನವನ್ನು ಹೇಳಿದೆ.

**10. ಅಕ್ಕಲಕರ**—ಇದು ರಸದಲ್ಲಿ ಸ್ವಲ್ಪ ಒಗರು ಮತ್ತು ಸ್ವ ಕಹಿಯಾಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ತೀಕ್ಷ್ಣವೂ, ಬಲ್ಯವೂ ಆಗಿರು ಅಕ್ಕಲಕರದಲ್ಲಿ ಪ್ರತಿಶ್ಯಾಯ, ಶೋಭೆ ಮತ್ತು ವಾತನಾಶಕಶಕ್ತಿ ಇದೆ. ಇದ ವೇದನಾ ನಿವಾರಕವೂ, ಕಫಘ್ನವೂ ಮತ್ತು ವಿಶೇಷವಾಗಿ ಲಾಲಾರಸವನ್ ಉತ್ಪನ್ನಮಾಡುವಂತಹುದೂ ಆಗಿದೆ. ಇದರಲ್ಲಿ ಉತ್ತೇಜಕ ಗುಣವು ವಿಶೇಷವಾಗಿ ರುವುದರಿಂದ ಆಯುರ್ವೇದದಲ್ಲಿ ಇದನ್ನು ಕಾಮೋತ್ತೇಜಕ ಔಷಧದ್ರವ್ಯಗಳ ಸೇರಿಸಲಾಗಿದೆ. ಇದಕ್ಕೆ ಸಮಾನವಾದ ಬೇರೆ ದ್ರವ್ಯಗಳ ಜೊತೆಯಲ್ಲಿ ಸೇರಿಸಿ ಇದನ್ ತೆಗೆದುಕೊಳ್ಳುವುದರಿಂದ ಇದು ಅತಿ ಹೆಚ್ಚಿನ ವೀರ್ಯವೃದ್ಧಿಯನ್ನು ಮಾಡುತ್ತದ ಇದರಿಂದ ಮುಖರೋಗಗಳೆಲ್ಲ ನಿವಾರಣೆಯಾಗುತ್ತವೆ; ಕಂಠದೋಷವು ಪರಿಹಾ ವಾಗುತ್ತದೆ. ಇದನ್ನು ಚೂರ್ಣರೂಪದಲ್ಲಿ ಹೊತ್ತಿಗೆ 5 ಗುಂಜಿಯಂತೆ ಜೇನಿನ್ ತೆಗೆದುಕೊಳ್ಳಲು ಹೇಳಿದೆ.

**11. ಅಗಸೆ**—( ಅಗಸ್ತ್ಯ ) ಇದರಲ್ಲಿ ಕೆಂಪು ಮತ್ತು ಬಿಳಿಯ ಎರಡು ಜಾತಿಗಳುಂಟು. ಬಿಳಿಯ ಜಾತಿಯದು ಸಾಮಾನ್ಯವಾಗಿ ಎಲ್ಲ ಕಡೆಯೂ ಇರ ಕೆಂಪು ವಿರಳ. ಇದು ಕಹಿರಸವುಳ್ಳದ್ದೂ, ರೂಕ್ಷವೂ, ಶೀತವೀರ್ಯವುಳ್ಳದ್ದೂ ಆಗಿ ಸ್ವಲ್ಪವಾತಕಾರಕವಿದ್ದರೂ—ಇದರಲ್ಲಿ ಪಿತ್ತ, ಕಫ, ಚಾತುರ್ಥಿಕಜ್ವರ, ವರಸೋಜ್ವ ಪ್ರತಿಶ್ಯಾಯ, ತ್ರಿದೋಷ, ಪ್ರಮೆ, ಶ್ವಾಸ, ವಿವರ್ಣತಾ, ಭೂತಬಾಧೆ, ಯೋ ಶೂಲೆ, ತೃಷ್ಣಾ, ಕುಷ್ಠ, ಪಾಪ, ಶ್ವಾಸಗಳನ್ನು ಪರಿಹರಿಸುವ ಸಾಮರ್ಥ್ಯವಿರು ದಲ್ಲದೇ ಇದು ಶ್ರಮಪರಿಹಾರಕವೂ ಆಗಿದೆ; ಇದರ ಎಲೆ, ಹೂವು, ಕಾಯಿ ಮೂರೂ ಔಷಧದ್ರವ್ಯಗಳಾಗಿವೆ. ಇದನ್ನು ಯಥೇಚ್ಛವಾಗಿ ಅಡಿಗೆಯಲ್ ಉಪಯೋಗಿಸುವ ರೂಢಿಯುದೆ. ಔಷಧ ರೂಪವಾಗಿ ಹೊತ್ತಿಗೆ 2— ತೊಲೆಯಷ್ಟನ್ನು ವಿದ್ಯುಕ್ತ ಅನುಪಾನದೊಡನೆ ಸೇವಿಸಬೇಕು.

**12. ಅಕ್ರೋಟ**—ಇದು ಮಧುರ, ಸ್ನಿಗ್ಧ, ಉಷ್ಣ, ರುಚಿದಾಯ ಶೀತಲ, ಭಾರ, ಕಫಪಿತ್ತಕಾರಕ, ವೀರ್ಯವರ್ಧಕ, ಬಲವರ್ಧಕ, ವಿರೇಚ ವಾತಪಿತ್ತನಾಶಕವೂ ಮತ್ತು ಕ್ಷಯ, ಹೃದ್ರೋಗ, ರುಧಿರದೋಷ, ರಕ್ತವಾ ನಿವಾರಕವೂ ಮತ್ತು ದಾಹಕಾರಕವೂ ಆಗಿರುತ್ತದೆ. ಇದು ವಾತರೋಗ ಮತ್ತು ಆಮವಾತದಲ್ಲಿ ಪಥ್ಯವಾಗಿರುತ್ತದೆ; ಕಾಮೋದ್ದೀಪಕವಾಗಿರುತ್ತದೆ; ಮುಖ್ಯವಾ

ವೃಷ್ಯವೂ, ರಕ್ತದೋಷಹರವೂ ಆಗಿರುತ್ತದೆ; ಉಳಿದ ಗುಣಗಳು ಬಾದಾಮಿಯಂತೆ ಇರುತ್ತದೆ. ಮರದ ತೊಗಟೆಯಲ್ಲಿ ಸಂಕೋಚನ ಮತ್ತು ಕ್ರಿಮಿಘ್ನ ಶಕ್ತಿ ಇದೆ; ಇದು ಸ್ತನ್ಯೋತ್ಪತ್ತಿಯನ್ನುಂಟುಮಾಡುತ್ತದೆ. ದುಷ್ಟವ್ರಣವನ್ನು ಪರಿಹರಿಸುತ್ತದೆ; ಇದರ ಕಾಯಿಯಲ್ಲಿಯೂ ಕ್ರಿಮಿಘ್ನಶಕ್ತಿಯಿದೆ; ಆಕ್ರೋಟದಲ್ಲಿ ತೈಲಗುಣವಿದೆ; ಇದು ಹರಳೆಣ್ಣೆಯಂತೆ ರೇಚಕವೂ,ಲಾಡಿಹುಳನಾಶಕವೂ ಇರುತ್ತದೆ. ಆಕ್ರೋಟವನ್ನು ಅವರವರ ಪಚನಶಕ್ತಿಗೆ ತಕ್ಕಂತೆ ಉಪಯೋಗಿಸಬೇಕು ಮತ್ತು ತೈಲವನ್ನು 2 ರಿಂದ 4 ತೊಲೆಯವರೆಗೆ ತೆಗೆದುಕೊಳ್ಳಬೇಕು.

**13. ಅಶೋಕ**—ಇದು ಕಹಿಯೂ, ಒಗರು ರಸವುಳ್ಳದ್ದೂ, ಶೀತಲ ವೀರ್ಯವುಳ್ಳದ್ದೂ ಇದ್ದು ಗ್ರಾಹಿಯೂ, ಸಂಗ್ರಾಹಕವೂ, ವೇದನಾಹರವೂ, ಮೂಳೆಯನ್ನು ಕೂಡಿಸುವ ಗುಣವುಳ್ಳದ್ದೂ ಆಗಿರುತ್ತದೆ; ಅಲ್ಲದೆ ಇದು ಹೃದ್ಯವೂ, ತ್ರಿದೋಷಹರವೂ, ಆಗಿದ್ದು ದಾಹ, ಕ್ರಿಮಿ, ಬಾವು, ಶ್ರಮ, ಗುಲ್ಮ, ಶೂಲೆ, ಉದರವ್ಯಾಧಿ, ವಿಷ, ಮೂಲವ್ಯಾಧಿ, ರಕ್ತವಿಕಾರ ಪ್ರದರ ರೋಗಗಳನ್ನು ಪರಿಹರಿಸುತ್ತದೆ. ಇದನ್ನು ಔಷಧಗಳಲ್ಲಿ ಸ್ವರಸ, ಚೂರ್ಣಗಳ ರೂಪದಲ್ಲಿ ಬಳಸುತ್ತಾರೆ. 15 ಗುಂಜಿಯಿಂದ 1 ತೊಲೆಯವರೆಗೆ ಆಯಾರೋಗಿಯ ಬಲಾಬಲಗಳನ್ನು ಅರಿತು ರೋಗೋಕ್ತ ಅನುಪಾನಗಳೊಡನೆ ಕೊಡುತ್ತಿರಬೇಕು.

**14. ಅರಾರೋಟ**—ಇದು ಮೂಲದಲ್ಲಿ ಭಾರತದ ಔಷಧ ದ್ರವ್ಯವಲ್ಲ. ಇದರ ಮೂಲ ಅಮೇರಿಕ(U S A.),ವೆಸ್ಟ್ ಇಂಡೀಸ್(West Indies)ಮತ್ತು ಬಾರ್ಮುಡಾ (Barmuda). ಇದರ ಉಪಯೋಗದ ಮಹತ್ವದಿಂದ ಪ್ರಥಮದಲ್ಲಿ ಮದ್ರಾಸ್ ಮತ್ತು ಕೇರಳದ ಕರಾವಳಿಯ ಪ್ರದೇಶದಲ್ಲಿ ಇದನ್ನು ಬೆಳೆಯತೊಡಗಿದರು; ಅನಂತರ ವ್ಯಾಪಕವಾಗಿ ಇದರ ಕೃಷಿಗೆ ಪ್ರಾರಂಭವಾಯ್ತು. ಆದರೆ ಪೇಟೆಯಲ್ಲಿ ಶುದ್ಧವಾದ ಆರಾರೋಟಿನ ಹಿಟ್ಟು ದೊರೆಯುವುದಿಲ್ಲ. ಶುದ್ಧವಾದ ಅರಾರೋಟ್ ಪೌಷ್ಟಿಕವೂ, ಶಾಂತಿದಾಯಕವೂ, ಶೀಘ್ರಪಚನವಾಗುವಂತಹುದೂ, ಎಲ್ಲ ಚಿಕಿತ್ಸೆಯಲ್ಲೂ, ರೋಗಗಳಲ್ಲೂ ಆಹಾರ ರೂಪದಲ್ಲಿ ಬಳಸಲು ಯೋಗ್ಯವಾಗಿರುತ್ತದೆ. ಅದರಲ್ಲೂ ಮಕ್ಕಳಿಗೂ, ದುರ್ಬಲರಿಗೂ, ರೋಗ ವಿಮುಕ್ತರಾಗಿ ಚೇತರಿಸಿಕೊಳ್ಳುವವರಿಗೂ ಇದು ಅತಿ ಉಪಯುಕ್ತವಾದ ಪೌಷ್ಟಿಕಾಂಶವುಳ್ಳ ಆಹಾರ. ಆದರೆ ವಾತಜನ್ಯವಾದ ಉದರವ್ಯಾಧಿ, ಗುಲ್ಮ ಮೊದಲಾದ ರೋಗವುಳ್ಳವರಿಗೆ ಕೊಡಕೂಡದು. ಆಂತೂ ಶುದ್ಧ ಅರಾರೋಟಿನಲ್ಲಿ ಶರೀರ ಪೋಷಕ ದ್ರವ್ಯಗಳು ಹೆಚ್ಚಿನ ಪ್ರಮಾಣದಲ್ಲಿವೆ.

**15. ಅಕ್ಕಿ**—ಅಕ್ಕಿಯಲ್ಲಿ ಹಲವು ಜಾತಿಯ ಅಕ್ಕಿಗಳಿವೆ; ಆರೋಗ್ಯದ ದೃಷ್ಟಿಯಿಂದ ಹೊಸ ಅಕ್ಕಿಗಿಂತಲೂ ಹಳೆಯ ಅಕ್ಕಿ ಒಳ್ಳೆಯದು; ಅಲ್ಲದೆ

ಮಿಲ್ಲಿಗೆ ಕೊಟ್ಟು ಪಾಲಿಷ್‌ಮಾಡಿದ ಅಕ್ಕಿಗಿಂತಲೂ ಕುಟ್ಟಿದ ಅಕ್ಕಿಯು ಅತ್ಯುತ್ತಮ. ಅಕ್ಕಿಯ ಮೇಲಿರುವ ತೌಡಿನಲ್ಲಿಯೇ ಪೌಷ್ಟಿಕಾಂಶವಿರುವುದು. ಆದುದರಿಂದ ಅದನ್ನು ಉಳಿಸಿಕೊಳ್ಳಲು ಪ್ರಯತ್ನಿಸಬೇಕು. ಸಾಮಾನ್ಯ ಜನರಿಗೆ ತಿಳಿಯನ್ನು ತೆಗೆಯದೆ ಇಂಗಿಸಿ ಮಾಡಿದ ಅಕ್ಕಿಯ ಅನ್ನವೂ, ರೋಗಿಗಳಿಗೆ ಹುರಿದು ಮಾಡಿದ ಅಕ್ಕಿಯ ಅನ್ನ ಅಥವಾ ಗಂಜಿಯು ಅತಿಶ್ರೇಷ್ಠ. ಎಲ್ಲ ರೋಗಗಳಲ್ಲೂ ಇದನ್ನು ಕೊಡಬಹುದು; ಹುರಿದ ಅಕ್ಕಿಯ ಅನ್ನವು (ಗಂಜಿ) ಬಹುಸುಲಭವಾಗಿ ಜೀರ್ಣವಾಗುತ್ತದೆ; ಅಕ್ಕಿ ತೊಳೆದ ನೀರನ್ನೂ ಕೂಡ (ತಂಡುಲೋದಕ) ಅನೇಕ ರೋಗಗಳಲ್ಲಿ ಅನುಪಾನವಾಗಿ ಹೇಳಿದೆ; ಅಲ್ಲದೆ ಈ ತಂಡುಲೋದಕವು ಪ್ರದರ ರೋಗದ ಮೇಲೆ ಹೊಟ್ಟೆಯೊಳಗೆ, ಚರ್ಮ ರೋಗಗಳಲ್ಲಿ ಹೊರಗೆ ತೊಳೆಯುವುದಕ್ಕೂ ಉಪಯೋಗಿಸುವುದರಿಂದ ಅವು ಪರಿಹಾರವಾಗುತ್ತವೆ. ಅಕ್ಕಿಯು ಮಧುರವೂ, ಲಘುವೂ, ರಸಯುಕ್ತವೂ, ಸ್ನಿಗ್ಧವೂ ಬಲಕಾರಕವೂ, ಮಲಶೋಧಕವೂ ಮತ್ತು ರುಚಿಕಾರಕವೂ ಆಗಿರುತ್ತದೆ. ಇದು ಸ್ವರಭಂಗದಮೇಲೂ, ಪ್ರಮೇಹದ ಮೇಲೂ, ಸತ್ಪರಿಣಾಮವನ್ನುಂಟುಮಾಡುತ್ತದೆ. ಅಲ್ಲದೆ ಇದು ವೃಷ್ಯವೂ (ವೀರ್ಯವರ್ಧಕ), ಬೃಂಹಣವೂ (ರಸರಕ್ತಾದಿವರ್ಧಕ), ಕ್ರಿಮಿಘ್ನವೂ (ಜಂತುನಾಶಕವೂ), ಶೀತಲವೂ, ಪಿತ್ತನಾಶಕವೂ, ಮೂತ್ರಲವೂ ಮತ್ತು ಸ್ವಲ್ಪ ಮಟ್ಟಿಗೆ ವಾತ ಮತ್ತು ಕಫಕಾರಕವೂ ಆಗಿದೆ.

**16. ಅನಾನಸು**—ಚೆನ್ನಾಗಿ ಕಳಿತ ಅನಾನಸು ರುಚಿಕಾರಕವೂ, ಹೃದಯಕ್ಕೆ ಶಕ್ತಿಯನ್ನು ನೀಡುವಂತಹುದೂ, ಪಿತ್ತನಾಶಕವೂ, ಮಧುರವೂ, ಶೀತಲವೂ, ಶ್ರಮ ಮತ್ತು ಬಿಸಿಲಿನ ತಾಪವನ್ನು ನೀಗುವಂತಹುದೂ ಆಗಿರುತ್ತದೆ. ಇದರಿಂದ ಅಪಚನ, ಮಂದಾಗ್ನಿಗಳು ನಿವಾರಣೆಯಾಗುತ್ತವೆ; ಮೂರ್ಛೆಯು ಪರಿಹಾರವಾಗುತ್ತದೆ. ಮಸ್ತಿಷ್ಕದ ನಿರ್ಬಲತೆಯನ್ನು ನೀಗುತ್ತದೆ. ಆದರೆ ಕಫವನ್ನು ಹೆಚ್ಚಿಸುತ್ತದೆ. ಸ್ವರಪೆಟ್ಟಿಗೆಯ ಮೇಲೆ ದುಷ್ಪರಿಣಾಮವನ್ನುಂಟುಮಾಡುತ್ತದೆ. ಆದುದರಿಂದ ಇದನ್ನು ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ಉಪ್ಪಿನ ನೀರಿನಿಂದೊಮ್ಮೆ ತೊಳೆದು ಅನಂತರ ಸ್ವಚ್ಛವಾದ ನೀರಿನಿಂದ ತೊಳೆದು ಆಮೇಲೆ ಸಕ್ಕರೆಯನ್ನೂ, ಒಣಶುಂಠಿಯ ಪುಡಿಯನ್ನೂ ಸ್ವಲ್ಪ ಸೇರಿಸಿ ಉಪಯೋಗಿಸುವುದು ಒಳ್ಳೆಯದು.

**17. ಅಫೀಮು**—ಇದು ರಸದಲ್ಲಿ ಕಹಿ, ಉಷ್ಣವೀರ್ಯ, ರೂಕ್ಷ, ತೀಕ್ಷ್ಣ, ವೀರ್ಯವರ್ಧಕ, ಬಲಕಾರಕ, ಗ್ರಾಹಿ, ಆನಂದದಾಯಕ, ಮಾದಕ, ಆಕ್ಷೇಪಹರ, ನಿದ್ರಾಪ್ರದ, ವೀರ್ಯಸ್ತಂಭಕ ಮತ್ತು ಸನ್ನಿಪಾತ, ಕ್ರಿಮಿ, ಅತಿಸಾರ, ಕಫ, ಪಾಂಡು, ಕ್ಷಯ, ಪ್ರಮೇಹ, ಶ್ವಾಸ, ಕಾಸ, ಪ್ಲೀಹ, ರಕ್ತಸ್ರಾವ, ಧಾತುಕ್ಷಯ ಮತ್ತು ಮೂತ್ರಸಾರ ನಿವಾರಕವೂ ಆಗಿರುತ್ತದೆ. ಆದರೆ ಎಡೆಬಿಡದೆ ದೀರ್ಘಕಾಲ ಸೇವಿಸುವುದರಿಂದ ನಪುಂಸಕತ್ವವುಂಟಾಗುವುದಲ್ಲದೇ ಮತ್ತೇರಿಸುವ

ಗುಣವಿರುವುದರಿಂದ ಪ್ರಮಾಣ ಮೀರಿ ಸೇವಿಸಿದರೆ ಪ್ರಾಣಾಪಾಯಕ್ಕೂ ಕಾರಣ ವಾಗುತ್ತದೆ. ಔಷಧ ರೂಪದಲ್ಲಿಯಲ್ಲದೆ ಮಾನಸಿಕ ಉತ್ತೇಜಕ ದೃಷ್ಟಿಯಿಂದ ಇದನ್ನು ಸೇವಿಸಲು ತೊಡಗಿದರೆ ಮುಂದೆ ಇದು ಆತನನ್ನು ತನ್ನ ದಾಸನನ್ನಾಗಿಯೇ ಮಾಡಿಕೊಂಡುಬಿಡುತ್ತದೆ; ಅನಂತರ ಇದರಿಂದ ಪರಿಹಾರವೇ ಇಲ್ಲ.

**18. ಅಮಟೆ**—ಇದರ ಕಾಯಿಯು ಹುಳಿಯೂ, ಒಗರೂ, ಜಡವೂ ಉಷ್ಣವೂ, ರುಚಿಕರವೂ, ಪಾಚಕವೂ ಮತ್ತು ಕಂಠಕ್ಕೆ ಹಿತಕಾರವೂ ಆಗಿರುತ್ತದೆ. ಆದರೆ ಪಿತ್ತವನ್ನೂ, ಕಫವನ್ನೂ, ಮತ್ತು ರಕ್ತವಿಕಾರವನ್ನೂ ಉಂಟುಮಾಡುತ್ತದೆ ಇದರಿಂದ ಆಮವಾತ ಮತ್ತು ಆಮದ ಪರಿಹಾರವಾಗುತ್ತದೆ. ಇದರ ಕಳಿತಹಣ್ಣು ಒಗರೂ, ರುಚಿಕರವೂ, ವಿಪಾಕದಲ್ಲಿ ಮಧುರವೂ, ಶೀತವೀರ್ಯವುಳ್ಳದ್ದೂ, ಸ್ನಿಗ್ಧವೂ, ವೀರ್ಯವರ್ಧಕವೂ; ಅಜೀರ್ಣಕಾರಕವೂ, ಪುಷ್ಟಿದಾಯಕವೂ ಬಲದಾಯಕವೂ ಇದ್ದು ವಾತ, ಕ್ಷತ, ಬಾಯಾರಿಕೆ, ಕ್ಷಯ, ರಕ್ತವಿಕಾರಗಳನ್ನು ನಾಶಮಾಡುತ್ತದೆ. ಇದರ ಕೋಮಲವಾದ ಚಿಗುರು ರುಚಿಕಾರಕವೂ, ಸ್ನಿಗ್ಧವೂ, ಗ್ರಾಹಿಯೂ ಮತ್ತು ಅಗ್ನಿಪ್ರದೀಪಕವೂ ಆಗಿದೆ. ಇದರ ಬೇರು, ತೊಗಟೆ, ಎಲೆ, ಚಿಗುರು, ಕಾಯಿ, ಹಣ್ಣುಗಳೆಲ್ಲವೂ, ರೋಗ ಚಿಕಿತ್ಸೆಯಲ್ಲಿ ಉಪಯೋಗವಾಗುತ್ತವೆ. ಇದರ ಚೂರ್ಣವನ್ನು 5 ರಿಂದ 10 ಗುಂಜಿಯವರೆಗೂ ಮತ್ತು ಸ್ವರಸವನ್ನು 2–3 ಚಮಚೆಯಷ್ಟು ಸಕ್ಕರೆ, ಹಸುವಿನ ಹಾಲಿನಲ್ಲಿ ಕೊಡುವ ಕ್ರಮವಿದೆ.

**19. ಅರಣಿ**—ಪೂರ್ವದಲ್ಲಿ ಯಜ್ಞಯಾಗಗಳನ್ನಾಚರಿಸುವಾಗ ಇದರ ಕಟ್ಟಿಗೆಯನ್ನು ಒಂದಕ್ಕೊಂದನ್ನು ತಿಕ್ಕಿ ಅಗ್ನಿಯನ್ನುಂಟುಮಾಡುತ್ತಿದ್ದರು. ಹೀಗೆ ಮಂಥನದಿಂದ ಅಗ್ನಿಯನ್ನುಂಟುಮಾಡುವಶಕ್ತಿ ಈ ಕಟ್ಟಿಗೆಯಲ್ಲಿದ್ದುದರಿಂದ ಇದಕ್ಕೆ ಅಗ್ನಿಮಂಥವೆಂಬ ಹೆಸರು ಬಂದಿದೆ ಇದು ಬೃಹತ್ಪಂಚ ಮೂಲದಲ್ಲಿ ಸೇರುತ್ತದೆ. ಇದರಲ್ಲಿ ಸಣ್ಣಜಾತಿಯಲ್ಲಿ ಎರಡೂ ಬಗೆಯೂ, ದೊಡ್ಡಜಾತಿಯಲ್ಲಿ ಎರಡುಬಗೆಯೂ ಹೀಗೆ ನಾಲ್ಕು ಪ್ರಭೇದಗಳಿವೆ. ಇವುಗಳೆಲ್ಲವುಗಳ ರಾಸಾಯನಿಕ ಸಂಘಟನೆಯು ಒಂದೇಯಾದರೂ ದೊಡ್ಡ ಅರಣಿಯನ್ನು ಹೊಟ್ಟೆಯೊಳಗೂ ಮತ್ತು ಚಿಕ್ಕ ಅರಣಿಯನ್ನು ಹೊರಗಿನ ಲೇಪನಕ್ಕೂ ಬಳಸುವುದು ರೂಢಿಯಲ್ಲಿದೆ. ಇದರ ಬೇರು, ಕಾಂಡ, ತೊಗಟೆ, ಎಲೆ, ಬೀಜಗಳೆಲ್ಲವೂ ಔಷಧ ದ್ರವ್ಯಗಳಾಗಿವೆ. ಅರಣಿಯು ರಕ್ತಪ್ರದರವನ್ನು, ಶ್ವಾಸಕಾಸವನ್ನು ಮತ್ತು ಬಾಲಕರ ಕ್ರಿಮಿರೋಗ ಮತ್ತು ಉದರವ್ಯಾಧಿಯನ್ನೂ ಪರಿಹರಿಸುತ್ತದೆ. ಅರಣಿಯಲ್ಲಿ ಒಂದು ಬಗೆಯ ಘಾಟು ಇರುತ್ತದೆ. ಇದು ಉಷ್ಣವೀರ್ಯವುಳ್ಳದ್ದಾಗಿದ್ದು ಪಿತ್ತ, ಅಪಚನ, ವಾತ, ಕಫ, ಪಾಂಡು, ಶೋಫೆ, ಮೂಲವ್ಯಾಧಿ, ಮಲಾವರೋಧ, ಆಮವಾತ, ಪ್ರತಿಶ್ಯಾಯ,

ಜ್ವರ, ಮೇಧೋರೋಗಗಳನ್ನು ಗುಣಮಾಡುವುದಲ್ಲದೆ ವಿಷ ನಿವಾರಕವೂ ಆಗಿದೆ. ಇದನ್ನು ಚೂರ್ಣರೂಪವಾಗಿ ಅರ್ಧದಿಂದ ಒಂದು ತೊಲೆಯವರೆಗೂ ಮತ್ತು ಸ್ವರಸವನ್ನು 4 ಚಮಚೆಯವರೆಗೂ ಯೋಗ್ಯ ಅನುಪಾನದಲ್ಲಿ ಕೊಡುವ ಕ್ರಮವಿದೆ. ಇವರ ಸೇವನೆಯಿಂದ ಹೆಚ್ಚಿನ ಪ್ರಯೋಜನವಿದೆ.

20 **ಅವರೆ**—ಅವರೆಯು ಗುರು, ಒಗರು, ರೂಕ್ಷವಾಗಿದ್ದು ಮಧುರವೂ ಶೀತವೀರ್ಯಯುಕ್ತವೂ ಆಗಿರುತ್ತದೆ. ಇದು ರುಚಿಕರವಾದರೂ ತೃಷೆ, ದಾಹ, ಉಷ್ಣ ವಾಯುಗಳನ್ನು ಕೆರಳಿಸಿ ವಿಷ್ಟಂಭವನ್ನುಂಟುಮಾಡುತ್ತದೆ; ಇದು ಸ್ತನ್ಯಜನಕವಾಗಿದ್ದು ವಿಷಪರಿಹಾರಕವೂ, ಕಫಘ್ನವೂ ಮತ್ತು ಶೋಭಘ್ನವೂ, ಆಗಿರುತ್ತದೆ; ಒಣಗಿದ ಅವರೆಗಿಂತ ಹಸಿಯ ಅವರೆಯು ಶ್ರೇಷ್ಠ. ಹಸಿಯಅವರೆಯು ಮಧುಮೇಹ ನಿವಾರಕವಾಗಿರುತ್ತದೆಂದು ಅನುಭವದಿಂದ ತಿಳಿಯಲಾಗಿದೆ. ಆದರೆ ಒಣಗಿದುದೂ ಬೇಯಿಸಿದುದೂ ತದ್ವಿರುದ್ಧವಾಗಿದ್ದು ಜಡವೂ, ಅಗ್ನಿಮಾಂದ್ಯವೂ ಆಗಿರುತ್ತದೆ. ಹಸಿಯ ಅವರೆಕಾಳು ಬಲ್ಯವೂ, ಕಾಂತಿದಾಯಕವೂ, ವೀರ್ಯವೃದ್ಧಿ-ಕಾರಕವೂ ಆದರೆ ಒಣಗಿದುದೂ, ಬೇಯಿಸಿದುದೂ ಇದಕ್ಕೆ ತೀರ ವಿರುದ್ಧವಾಗಿ ವಾತಕಾರಕವೂ, ವೀರ್ಯನಾಶಕವೂ ಆಗಿದ್ದು ಮದಕಾರಕವಾಗಿರುತ್ತದೆ.ಆದುದರಿಂದ ಅವರೆಯ ಬೇಳೆಯನ್ನು ಸ್ವಲ್ಪ ಹುರಿದು ಉಪಯೋಗಿಸುವುದು ಒಳ್ಳೆಯದು.

21 **ಅಲಸಂದೆ**—ಅಲಸಂದೆಯಲ್ಲಿ ಕಪ್ಪು, ಬಿಳಿದು, ಕೆಂಪು, ಚಿಕ್ಕದು, ದೊಡ್ಡದು ಹೀಗೆ ಅನೇಕ ಪ್ರಕಾರಗಳುಂಟು. ಚಿಕ್ಕಜಾತಿಯುವು ದೊಡ್ಡದಕ್ಕಿಂತ ಒಳ್ಳೆಯದು. ಇದು ರೂಕ್ಷವೂ, ಒಗರೂ, ವಿಪಾಕದಲ್ಲಿ ಮಧುರವೂ ಆಗಿದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ. ಇವರಲ್ಲಿ ಸ್ತ್ರೀಯರ ಸ್ತನ್ಯವನ್ನೂ, ರಜಸ್ಸನ್ನೂ ಹೆಚ್ಚಿಸುವ ಶಕ್ತಿ ಇರುವುದಲ್ಲದೆ ಪುರುಷರ ವೀರ್ಯವನ್ನೂ ವೃದ್ಧಿಪಡಿಸುವ ಗುಣವಿರುತ್ತದೆ; ಆದರೆ ಇದು ವಾತಕಾರಕವಾಗಿರುತ್ತದೆ; ಮಲಬದ್ಧತೆಯನ್ನುಂಟು ಮಾಡುತ್ತದೆ, ಪಿತ್ತವನ್ನೂ, ಶ್ಲೇಷ್ಮವನ್ನೂ ಶಮನಗೊಳಿಸತಕ್ಕ ಶಕ್ತಿಯು ಅಲಸಂದೆಗಿದೆ; ಹಸಿಯ ಅಲಸಂದೆಯು ಬಲ್ಯ, ಶಕ್ತಿದಾಯಕ ಆದರೂ ಇದನ್ನು ಬೇಯಿಸಿ ಉಪಯೋಗಿಸುವ ಸಂದರ್ಭದಲ್ಲಿ ಮೊದಲು ಸ್ವಲ್ಪ ಹುರಿದುಕೊಳ್ಳುವು-ದರಿಂದ ವಾತದ ತೀವ್ರತೆಯು ತಗ್ಗುತ್ತದೆ. ಆರೋಗ್ಯ ದೃಷ್ಟಿಯಿಂದ ದ್ವಿದಳ ಧಾನ್ಯಗಳೆಲ್ಲವೂ ಒಳ್ಳೆಯವೇ. ಆದರೂ ಪ್ರತಿಯೊಂದರಲ್ಲೂ ಅಷ್ಟೋ ಇಷ್ಟೋ ದೋಷವಿದ್ದೇ ಇರುತ್ತದೆ. ಈ ದೃಷ್ಟಿಯಿಂದ ವಿಚಾರ ಮಾಡುವಾಗ ಎಲ್ಲ ಧಾನ್ಯಗಳಿಗಿಂತ ತೊಗರಿ ಮತ್ತು ಹೆಸರು ಸರ್ವ ಶ್ರೇಷ್ಠ. ಆದರೆ ಮಧ್ಯೆ ಬದಲಾವಣೆ ಗಳಿರುವುದು ಒಳ್ಳೆಯದೇ. ಆದುದರಿಂದ ಆಗಾಗ ಬೇರೆ ಇತರ ದ್ವಿದಳಧಾನ್ಯ ಗಳನ್ನೂ ಆಹಾರದಲ್ಲಿ ಬಳಸುವುದು ಉತ್ತಮ ಸಾಂಪ್ರದಾಯ

**22. ಇಸಬುಗೋಲು**—ಇದರ ಬೀಜವೇ ಔಷಧ ದ್ರವ್ಯವಾಗಿದೆ. ಇದು ಪೌಷ್ಟಿಕವೂ, ಮಧುರವೂ, ಗ್ರಾಹಿಯೂ, ಶೀತವೂ, ಮೂತ್ರಲವೂ ಮತ್ತು ಜಠರ ಶೋಧಕವೂ ಆಗಿದೆ. ಇದರಲ್ಲಿ ರಕ್ತಾತಿಸಾರ, ರಕ್ತಪಿತ್ತ, ಅದ್ಮಾನ, ಉಷ್ಣವಾತ, ಶುಕ್ರಮೇಹ ಮತ್ತು ಕಫಪಿತ್ತಗಳನ್ನು ಪರಿಹರಿಸುವ ಶಕ್ತಿ ಇದ್ದರೂ ಸ್ವಲ್ಪಮಟ್ಟಿಗೆ ವಾತಕಾರಿಯೇ ಆಗಿದೆ. ಆದರೆ ಇದನ್ನು ಇಡಿಯದಾಗಿ ಉಪಯೋಗಿಸಿದರೆ ಕರುಳಿನಲ್ಲಿ ದಾಹವನ್ನುಂಟುಮಾಡುವುದರಿಂದ ಪುಡಿಮಾಡಿ ನೀರಿನಲ್ಲಿ ನೆನೆಯಿಟ್ಟೇ ಬಳಸಬೇಕು; ದೀರ್ಘಕಾಲ ಇಸಬುಗೋಲಿನ ಚೂರ್ಣದ ಬಳಕೆಯು ಮಲಬದ್ಧತೆಯನ್ನುಂಟು ಮಾಡುತ್ತದೆಂಬುದನ್ನು ಮರೆಯಬಾರದು. ಇದನ್ನು ಹೊತ್ತಿಗೆ ಅರ್ಧದಿಂದ ಒಂದು ತೊಲೆಯವರೆಗೆ ದಿನಕ್ಕೆ ಒಂದೇವೇಳೆ ತಣ್ಣೀರಿನ ಅನುಪಾನದಲ್ಲಿ ಉಪಯೋಗಿಸ ಬೇಕೆಂದು ಹೇಳಿದೆ.

**23. ಇಪ್ಪೆ**—ಇದು ತಿಕ್ತವೂ, ವಾತನಾಶಕವೂ, ಕಫನಾಶಕವೂ ಆಗಿದ್ದು ಮೂಲವ್ಯಾಧಿ ಮತ್ತು ಕಾಸರೋಗಗಳನ್ನು ಪರಿಹರಿಸುವ ಶಕ್ತಿಯುಳ್ಳದ್ದಾಗಿರುತ್ತದೆ; ಇದರಿಂದ ಪ್ರಮೇಹವು ನಿವಾರಣೆಯಾಗುತ್ತದೆ; ಗುಲ್ಮವು ಪರಿಹಾರವಾಗುತ್ತದೆ. ಅಗ್ನಿಮಾಂದ್ಯವು ನೀಗುತ್ತದೆ. ಅಲ್ಲದೆ ಜ್ವರ, ಪಾಂಡು, ಸಂಗ್ರಹಣಿ, ಅರುಚಿ, ಧಾತ ವಿಕಾರ, ಕಾಸ, ಶ್ವಾಸ, ಮುಖರೋಗ ಮೊದಲಾದುವುಗಳೆಲ್ಲ ಗುಣಹೊಂದುತ್ತವೆ. ಇದು ಉಷ್ಣವೀರ್ಯವುಳ್ಳದ್ದಾಗಿದ್ದು ಮುಖರೋಗಗಳನ್ನೆಲ್ಲ ಪರಿಹರಿಸುವುದಲ್ಲದೇ ತೀಕ್ಷ್ಣವಾದ ಬಾಯಾರಿಕೆಯನ್ನೂ ಜಯಿಸುತ್ತದೆ; ರಕ್ತಶುದ್ಧಿಯನ್ನುಂಟುಮಾಡಿ ದೇಹಕ್ಕೆಕಾಂತಿಯನ್ನೀಯುತ್ತದೆ. ವ್ರಣರೋಗದ ಮೇಲೆ ಸತ್ಪರಿಣಾಮವನ್ನುಂಟು ಮಾಡುತ್ತದೆ.ಇದರ ಕಷಾಯದಿಂದ ಗಾಯಗಳನ್ನು ತೊಳೆಯುವುದು ಬಹಳ ಒಳ್ಳೆಯದು.

**24. ಇಂಗು**—ಇದು ಪಾಚಕ, ದೀಪಕ, ಅನುಲೋಮಿಕ, ವಾತನಾಶಕ, ಕಫನಾಶಕವಿದ್ದು ಕ್ರಿಮಿಘ್ನವೂ ಆಗಿದೆ; ಅಜೀರ್ಣ, ಹೊಟ್ಟೆಯುಬ್ಬರ, ನಾಯಿಕೆಮ್ಮು ಕಾಲರಾಗಳಲ್ಲಿ ಇದು ಹೆಚ್ಚಿನ ಪ್ರಯೋಜನಕಾರಿಯಾಗಿದೆ. ಇದು ಗರ್ಭಾಶಯದ ವಿಕಾರಗಳನ್ನು ನಿಯಂತ್ರಿಸುತ್ತದೆ. ಶ್ವಾಸಕೋಶ ಮತ್ತು ನರಮಂಡಲಗಳನ್ನು ಉತ್ತೇಜಿಸುತ್ತದೆ. ಪಕ್ಷಾಘಾತ, ಮನ್ಯಾಸ್ತಂಭ, ಗೃಧ್ರಸಿ ಮೊದಲಾದ ವಾತ ವಿಕಾರಗಳಲ್ಲಿ ಇಂಗು ಗುಣಕಾರಿ. 1 ರಿಂದ 5 ಗುಂಜಿಯತನಕ ಬಿಸಿನೀರು, ಬೆಲ್ಲಗಳ ಅನುಪಾನದಲ್ಲಿ ಕೊಡಬೇಕು; ಕರುಳಿನ ರೋಗಗಳಲ್ಲಿ ಉಗುರು ಬೆಚ್ಚಗಿನ ನೀರಿನೊಡನೆ ಬಸ್ತಿಯನ್ನು ಕೊಡುವ ಕ್ರಮವೂ ಇದೆ.

**25. ಈಶ್ವರೀಬೇರು**—ಇದು ಕಟುರಸಯುಕ್ತವಾದ ಔಷಧವಾಗಿದ್ದು ಇದರಲ್ಲಿ ಶ್ವಾಸ, ಕಾಸ, ಹೃದ್ರೋಗ, ಭೂತ, ರಾಕ್ಷಸ ಬಾಧೆಗಳನ್ನು ಪರಿಹರಿಸುವ

ಸಾಮರ್ಥ್ಯವಿರುತ್ತದೆ. ನಿಯಮಿತ ಪ್ರಮಾಣದಲ್ಲಿ ಉಪಯೋಗಿಸಿದಾಗ ಇದರಿಂದ ಅಜೀರ್ಣ ಪರಿಹಾರವಾಗುವುದಲ್ಲದೆ ಸ್ತ್ರೀಯರ ಮುಟ್ಟಿನ ದೋಷವೂ ಪರಿಹಾರ ವಾಗುತ್ತದೆ. ಇದು ಜ್ವರಘ್ನವೂ ಮತ್ತು ಉತ್ತೇಜಕವೂ ಹೌದು. ಆದರೆ ಪ್ರಮಾಣ ಮೀರಿದಾಗ ವಾಕರಿಕೆ, ವಾಂತಿ, ಗರ್ಭಪಾತಗಳುಂಟಾಗುತ್ತವೆ. ಸರ್ಪದಂಷ್ಟ್ರದ ವಿಷ ವನ್ನು ಇದು ನಿವಾರಿಸುತ್ತದೆ. ಅನುಪಾನ ಭೇದದಿಂದ ಸ್ತ್ರೀಯರ ಸೂತಕಶೂಲೆ, ಶೋಭೆಯನ್ನು ಗಲಗಂಡಗಳನ್ನು ಪರಿಹರಿಸುವ ಶಕ್ತಿ ಇದಕ್ಕಿದೆ. ಹೊತ್ತಿಗೆ-15ರಿಂದ 30 ಗುಂಜಿಯವರೆಗೆ ಲಿಂಬೆರಸ, ಬೆಲ್ಲ ಮೊದಲಾದ ಅನುಪಾನಗಳೊಡನೆ ಸೇವನೆ.

**26. ಈರುಳ್ಳಿ**—ಇದು ಮೃದುವಿರೇಚನಕಾರಿಯಾಗಿದ್ದು ಮಲಬದ್ಧ ತೆಯನ್ನು ಹೋಗಲಾಡಿಸುವ ಗುಣ ಇದಕ್ಕಿದೆ. ವಾತ, ಪಿತ್ತ, ಕಫ, ಈ ಮೂರು ದೋಷಗಳಲ್ಲೂ ಇದು ಗುಣಕಾರಿಯಾಗಿದೆ. ಇದರಲ್ಲಿ ಬೆವರನ್ನು ಹುಟ್ಟಿಸುವ, ನಿದ್ರೆಯನ್ನುಂಟುಮಾಡುವ, ಕೆಮ್ಮನ್ನು ನಿವಾರಿಸುವ, ಸ್ನಾಯುಮಂಡಲದ ಉದ್ವೇಗವನ್ನು ಶಮನಗೊಳಿಸುವ ಶಕ್ತಿ ಇದೆ; ಅಲ್ಲದೆ ಇದು ವಿಷಪರಿಹಾರಕವೂ ಹೌದು. ಈರುಳ್ಳಿಯಲ್ಲಿ ಕೆಂಪು ಮತ್ತು ಬಿಳಿಯ ಎರಡು ಜಾತಿಗಳುಂಟು. ಚಿಕಿತ್ಸೆಯಲ್ಲಿ ಕೆಂಪಿಗಿಂತಲೂ ಬಿಳಿಯದು ಶ್ರೇಷ್ಠ; ಬೇಯಿಸಿರುವುದಕ್ಕಿಂತ ಹಸಿಯದು ಉತ್ತಮ. ಇದನ್ನು ಹಸಿಯಾಗಿಯೂ, ಬೇಯಿಸಿಯೂ ಉಪಯೋಗಿಸುವ ಕ್ರಮವಿದೆ; ಹೊಟ್ಟೆ. ಯೊಳಗೂ, ಹೊರಗಿನ ಚಿಕಿತ್ಸೆಯಲ್ಲೂ ಇದು ಪ್ರಯೋಜನಕ್ಕೆ ಬರುತ್ತದೆ. ಸಕ್ಕರೆ ಜೇನಿನ ಅನುಪಾನದಲ್ಲಿ ಸಂದರ್ಭೋಚಿತವಾಗಿ ಪ್ರಮಾಣವನ್ನು ನಿರ್ಧರಿಸಬೇಕು

**27. ಈಚಲು**—ಇದು ಮಧುರವೂ, ಸ್ನಿಗ್ಧವೂ, ಪೌಷ್ಟಿಕವೂ, ಉತ್ತೇಜಕವೂ, ಮೇದೋವೃದ್ಧಿಕಾರಕವೂ, ವಿಬಂಧಕವೂ, ಕಾಮೋದ್ದೀಪಕವೂ ಇದ್ದು ಹೃದಯವಿಕಾರವನ್ನೂ, ಉದರವಿಕಾರವನ್ನೂ, ಜ್ವರ, ವಮನ, ಮೂರ್ಛೆ, ಮೊದ ಲಾದುವನ್ನು ಪರಿಹರಿಸುತ್ತದೆ. ಔಷಧ ಪ್ರಯೋಗದಲ್ಲಿ ಇದರ ಹಣ್ಣನ್ನು ಉಪಯೋಗಿಸುವುದು ತೀರಕಡಿಮೆ. ಬೀಜದ ಉಪಯೋಗವು ಖರ್ಜೂರದಂತೆಯೇ ನಡೆಯುತ್ತದೆ ಮತ್ತು ಇದರ ಎಲೆಗಳ ಗುಣಧರ್ಮಗಳು ಬೀಜದಂತೆಯೇ ಇರುತ್ತದೆ. ಇದರ ಬೇರು ವೇದನಾಹರವಾಗಿದೆ; ಬೇರಿನ ಕಷಾಯದಿಂದ ಬಾಯಿಮುಕ್ಕಳಿಸುವು ದರಿಂದ ಹಲ್ಲಿನ ಶೂಲೆ ನಿವಾರಣೆಯಾಗುತ್ತದೆ; ಈಚಲ ರಸವು (ನೀರಾ) ಬಹು ಪೌಷ್ಟಿಕವೂ, ಆರೋಗ್ಯದಾಯಕವೂ ಮತ್ತು ಉತ್ತಮವಾದಪೇಯವೂ ಆಗಿರುತ್ತದೆ. ಇದರಲ್ಲಿ ಬಹು ಅಮೂಲ್ಯವಾದ ಜೀವಸತ್ವವಿದೆ; ಇದು ಕ್ಷಯ ನಿವಾರಕವೂ, ಶ್ವಾಸಕಾಸಪರಿಹಾರಕವೂ ಆಗಿರುತ್ತದೆ. ಇತರ ಯಾವ ಔಷಧಗಳನ್ನೂ ಸೇವಿಸದೆ ಈ ನೀರಾ ಒಂದನ್ನೇ ನಿತ್ಯನಿಯಮಿತವಾಗಿ ತೆಗೆದುಕೊಳ್ಳುತ್ತಿದ್ದರೆ ಅದರಿಂದ ಅಪಾರವಾದ ಆರೋಗ್ಯಪ್ರಾಪ್ತಿಯಾಗುತ್ತದೆ. ಇದರಿಂದ ನೀರಾಸವವೇ ಮುಂತಾದ ಅನೇಕ ಔಷಧಗಳನ್ನು ಮಾಡುವ ಕ್ರಮವಿದೆ.

**29. ಉತ್ತರಣೆ**—ಇದರಲ್ಲಿ ಬಿಳಿ ಮತ್ತು ಕೆಂಪು ಎರಡು ಜಾತಿಗಳುಂಟು. ಶರೀರದಲ್ಲಿ ಬೇರೆ ಬೇರೆಯ ಕಾರಣಗಳಿಂದ ದೂಷಿತವಾಗಿರುವ ಸಪ್ತಧಾತುಗಳನ್ನು ಇದು ಶುದ್ಧೀಕರಿಸುವುದರಿಂದಲೇ ಇದಕ್ಕೆ ಅಪಾಮಾರ್ಗವೆಂಬ ಹೆಸರು ಬಂದಿದೆ. ಬಿಳಿಯ ಮತ್ತು ಕೆಂಪು ಎರಡೂ ಜಾತಿಯ ಉತ್ತರಣೆಗಳೂ ತಮ್ಮ ತಮ್ಮಲ್ಲಿಯ ಪಾಚಕ, ಕಫನಾಶಕ, ಆಮ್ಲಪಿತ್ತನಾಶಕ, ದೀಪಕ, ರಕ್ತಶುದ್ಧಿಕಾರಕ, ರಕ್ತವರ್ಧಕ ಗುಣವಿಶೇಷಗಳಿಂದಾಗಿ ಸುಲಭ ಪ್ರಸವವನ್ನುಂಟುಮಾಡಿರುವುದರಲ್ಲೂ, ಚೇಳು, ಜರಿ, ನಾಯಿ, ಇಲಿಗಳ ವಿಷ ನಿವಾರಣೆಯಲ್ಲೂ, ಗುಲ್ಮ, ಸಂಧಿವಾತ, ಯಕೃತ್ತುಗಳ ವಿಕಾರಗಳನ್ನು ಪರಿಹರಿಸುವುದರಲ್ಲೂ ಹೆಚ್ಚಿನ ಪ್ರಯೋಜನಕಾರಿಗಳಾಗಿವೆ. ಕೆಂಪದಕ್ಕಿಂತ ಬಿಳಿಯದೇ ಚಿಕಿತ್ಸೆಯಲ್ಲಿ ಶ್ರೇಷ್ಠ; ಪ್ರಮೇಹ, ಮೂತ್ರಕೋಶಗಳ ಬಾವು, ಪ್ರದರ, ಗಂಡಮಾಲೆಗಳ ಮೇಲೂ ಉತ್ತರಣೆಯು ಒಳ್ಳೆಯ ಕೆಲಸವನ್ನು ಮಾಡುತ್ತದೆ. ಉತ್ತರಣೆಯ ಬೇರು, ಕಾಂಡ, ಎಲೆ, ಬೀಜಗಳೆಲ್ಲವೂ ಉಪಯೋಗಕ್ಕೆ ಬರುವುದಲ್ಲದೇ ಹೊರಗೂ ಒಳಗೂ ಕೂಡ ಇದನ್ನು ಚಿಕಿತ್ಸೆಯಲ್ಲಿ ಬಳಸಲಾಗುತ್ತದೆ. ಇದನ್ನು ಚೂರ್ಣ, ಕಷಾಯ, ಕ್ಷಾರ, ಭಸ್ಮಗಳ ರೂಪದಲ್ಲಿ ಉಪಯೋಗಿಸುವುದುಂಟು. ಇದರ ಸ್ವರಸ 2-3 ಚಮಚ(1 ತೊಲ)ಚೂರ್ಣ ಕಾಲು ತೊಲದಿಂದ ಅರ್ಧತೊಲ, ಬೀಜ 15 ರಿಂದ 25 ಗುಂಜಿ, ಕ್ಷಾರ 2 ರಿಂದ 4 ಗುಂಜಿ, ಭಸ್ಮ 5 ರಿಂದ 10 ಗುಂಜಿಯವರೆಗೆ ಉಪಯೋಗಿಸಬಹುದು. ಅನುಪಾನಕ್ಕೆ ಜ್ಯೇಷ್ಠ ಮಧು, ನೆಗ್ಗಿಲ ಮುಳ್ಳು, ಜೇನು ಮೊದಲಾದುವುಗಳನ್ನು ಹೇಳಿದ್ದರೂ ತಜ್ಞ ವೈದ್ಯರು ರೋಗಕ್ಕೆ ತಕ್ಕ ಅನುಪಾನವನ್ನು ಕಲ್ಪಿಸಿಕೊಳ್ಳಬೇಕು.

**30. ಉಮ್ಮತ್ತ**–(ಉಮ್ಮತ್ತೀಗಿಡ) ಇದರಲ್ಲಿ ಕಪ್ಪು ಮತ್ತು ಬಿಳಿಯ ಎರಡು ಭೇದಗಳುಂಟು. ಚಿಕಿತ್ಸೆಯಲ್ಲಿ ಕರಿಯ ಉಮ್ಮತ್ತವೇ ಶ್ರೇಷ್ಠ. ಇದು ಉಷ್ಣವಿ[illegible]ಗಿ ವಾತವರ್ಧಕವೂ, ಕಾಂತಿದಾಯಕವೂ, ನಿದ್ರಾಕಾರಕವೂ, ಮದಕಾ[illegible]ರುತ್ತದೆ. ಇದರಲ್ಲಿ ಶ್ವಾಸಕಾಸ, ಜ್ವರ, ಕುಷ್ಠ, ವ್ರಣ, ಕಫ, ವಿಕಾರ [illegible] ಮತ್ತು ಕ್ರಿಮಿನಾಶಕ ಶಕ್ತಿಗಳಿದ್ದು ಇದು ವೇದನಾಹರವೂ, ಸ್ತಂಭಕ[illegible] ಆಗಿರುತ್ತದೆ. ಇದರ ವಾತವರ್ಧಕ ಗುಣಗಳಿಂದ ಇದನ್ನು ಹೆಚ್ಚಿನ ಪ್ರಮಾಣದಲ್ಲಿ ತೆಗೆದುಕೊಂಡರೆ ಬುದ್ಧಿಭ್ರಮೆಯನ್ನುಂಟುಮಾಡುವ ಗುಣ ಇದಕ್ಕಿದ್ದರೂ [illegible]ಪ್ರಮಾಣದ ಸೇವನೆಯು ವಾತವನ್ನು ಜಯಿಸುತ್ತದೆ. ಇದರ ಎಲೆ, ಹೂವು, ಬೀಜ, ಬೇರು, ಕಾಂಡಗಳೆಲ್ಲವೂ ಚಿಕಿತ್ಸೆಯಲ್ಲಿ ಉಪಯೋಗಕ್ಕೆ ಬರುತ್ತವೆ. ಆದರೆ ಹೊಟ್ಟೆಯೊಳಗೆ ಕೊಡುವ ಸಂದರ್ಭದಲ್ಲಿ ಸರಿಯಾಗಿ ಶುದ್ಧಿಮಾಡಿಯೋ ಉಪಯೋಗಿಸಬೇಕು. ಇದನ್ನು ಚೂರ್ಣ, ಕ್ಷಾರ, ಭಸ್ಮಗಳ ರೂಪಗಳಲ್ಲಿ ಹೊಟ್ಟೆಯೊಳಗೆ ಉಪಯೋಗಿಸಿದರೆ ಸ್ವರಸವನ್ನು ಬಾಹ್ಯಲೇಪನಾದಿಗಳಿಗೆ ಬಳಸುವ

ಕ್ರಮವಿದೆ. ಇದೇ ಸ್ವತಃ ವಿಷವುಳ್ಳದ್ದಾದರೂ ಹುಚ್ಚುನಾಯಿ, ನರಿ ಮೊದಲಾದ ವಿಷಗಳನ್ನು ಪರಿಹರಿಸುತ್ತದೆ.

**31. ಉದ್ದು**—ಮಾಂಸಾಹಾರಿಗಳಲ್ಲಿ ಮಾಂಸವು ಹೇಗೆ ಪುಷ್ಟಿದಾಯಕ ವೆಂದು ಪರಿಗಣಿಸಲ್ಪಟ್ಟಿದೆಯೋ ಅದೇ ರೀತಿಯಲ್ಲಿ ಉದ್ದು ಸಸ್ಯಾಹಾರಿಗಳಲ್ಲಿ (ಶಾಖಾಹಾರಿ) ಪುಷ್ಟಿಕಾರಕವೆಂದು ತಿಳಿಯಲಾಗಿದೆ; ಅಂದರೆ ಉದ್ದಿನಲ್ಲಿ ಮಾಂಸ ವರ್ಧಕವೂ, ಪುಷ್ಟಿದಾಯಕವೂ ಆದ ಗುಣವಿದೆ; ಇದು ಸ್ನಿಗ್ಧವೂ, ಜಡವೂ, ವಿಪಾಕದಲ್ಲಿ ಮಧುರವೂ, ರಸಯುಕ್ತವೂ, ಬಲದಾಯಕವೂ, ರುಚಿಕಾರಕವೂ, ವೀರ್ಯವರ್ಧಕವೂ, ಮಲಕಾರಕವೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಅಲ್ಲದೆ ಇದು ಕಫಪಿತ್ತಕಾರಕವೂ, ಹೃದ್ಯವೂ, ಸ್ತನ್ಯವರ್ಧಕವೂ, ಮಾಂಸ ಮತ್ತು ಮೇಧೋವರ್ಧಕವೂ, ರಕ್ತಪಿತ್ತ ಪ್ರಕೋಪಕಾರಕವೂ ಆಗಿರುತ್ತದೆ. ಇದರಿಂದ ಶ್ರಮಶ್ವಾಸ, ಪರಿಣಾಮಶೂಲೆ, ಮೂಲವ್ಯಾಧಿ, ಅರ್ಧಾಂಗವಾಯುಗಳು ನಿವಾರಣೆ ಯಾಗುತ್ತವೆ. ಆದರೆ ಕೆಲವರ ಅಭಿಪ್ರಾಯದಲ್ಲಿ ಇದು ವಾತ ವೃದ್ಧಿಯನ್ನುಂಟು ಮಾಡುವುದೆಂದೂ, ಶೀತಕಾರಿಯೆಂದೂ ಇದೆ. ಆದರೆ ಇತರ ಎಷ್ಟೋ ಧಾನ್ಯಗಳಿಗಿಂತ ಇದರಲ್ಲಿ ಅರ್ಧದಷ್ಟು ವಾತಕಾರಕ ಗುಣವಿಲ್ಲವೆಂಬುದು ತೀರಸತ್ಯ. ಇದರಲ್ಲಿ ಕಾಡುಉದ್ದೆಂದು ಇನ್ನೊಂದು ಜಾತಿಯಿದೆ.

**32. ಎಕ್ಕೆ**—ಇದರಲ್ಲೂ ಕೆಂಪು ಮತ್ತು ಬಿಳಿಯ ಎರಡು ಜಾತಿಗಳಿವೆ; ಚಿಕಿತ್ಸೆಯಲ್ಲಿ ಬಿಳಿಯದೇ ಉತ್ತಮ; ಅದರ ಅಭಾವದಲ್ಲಿ ಕೆಂಪದನ್ನೂ ಉಪಯೋಗಿಸುವ ರೂಢಿಯುಂಟು. ಇದರ ಬೇರು, ತೊಗಟೆ, ಎಲೆ, ಮೊಗ್ಗು, ಹೂವು ಎಲ್ಲವೂ ರೋಗಚಿಕಿತ್ಸೆಯಲ್ಲಿ ಉಪಯೋಗವಾಗುತ್ತವೆ. ಇದು ಬಲ್ಯ, ಕಫನಾಶಕ ಮತ್ತು ಸ್ವೇದನ ಗುಣವುಳ್ಳದ್ದಾಗಿರುತ್ತದೆ. ಇದರಲ್ಲಿ ದೀಪನ, ಪಾಚನ, ವ್ರಣ ಶೋಧನ, ವಾತಘ್ನ ಮತ್ತು ವೇದನಾಹರ ಶಕ್ತಿಯಿದ್ದು ಇದರಿಂದ ಕೆಮ್ಮು, ದಮ್ಮು ಅತಿಸಾರ, ಸಂಗ್ರಹಣಿ, ವಿಷಬಾಧೆ, ಅಜೀರ್ಣಾದಿಗಳು ನಿವಾರಣೆಯಾಗು ತ್ತವೆ. ಇದನ್ನು ಚೂರ್ಣ ಸ್ವರಸ, ಭಸ್ಮಗಳ ರೂಪದಲ್ಲಿ ಉಪಯೋಗಿಸುವ ಪದ್ಧತಿಯುಂಟು. ಬೇರಿನ ತೊಗಟೆಯನ್ನು 5 ರಿಂದ 10 ಗುಂಜಿಯವರೆಗೆ ಉಪಯೋಗಿಸಿದರೆ, ಬೇರಿನ ಕಾಂಡದ ಚೂರ್ಣವನ್ನೂ, ಎಲೆಯ ಚೂರ್ಣವನ್ನು ಕಾಲು ತೊಲದಿಂದ ಅರ್ಧ ತೊಲೆಯವರೆಗೂ ಬಳಸಬಹುದು; ಅನುಪಾನಕ್ಕೆ ಸೈಂಧ್ರುಲವಣ, ಬೆಲ್ಲ, ಬಿಸಿನೀರು, ಜೇನುತುಪ್ಪವನ್ನು ಹೇಳಲಾಗಿದೆ.

**33. ಎಳ್ಳು**—ಇದು ಉಷ್ಣವೀರ್ಯವುಳ್ಳದ್ದಾಗಿದ್ದು ಇದಕ್ಕೆ ಮೂಲವ್ಯಾಧಿ ವಾತ, ವ್ರಣ ಮತ್ತು ಚರ್ಮವ್ಯಾಧಿಯನ್ನು ಪರಿಹರಿಸತಕ್ಕ ಸಾಮರ್ಥ್ಯವಿದೆ.

ಸ್ತ್ರೀಯರ ತಡೆದ ಮಾಸಿಕಧರ್ಮವನ್ನು ಸರಿಪಡಿಸುತ್ತದೆ. ರಕ್ತವೃದ್ಧಿ, ವೀರ್ಯ ವೃದ್ಧಿಯನ್ನುಂಟುಮಾಡುತ್ತದೆ, ಆದರೆ ಇದು ಜಡವು, ಉಷ್ಣವೂ ಆಗಿರುವುದ ರಿಂದ ಸುಲಭವಾಗಿ ಜೀರ್ಣಿಸುವುದಿಲ್ಲ. ಮತ್ತು ಮೇಹವ್ಯಾಧಿಯವರಿಗೆ ಹೆಚ್ಚಿನ ಕೆಡಕನ್ನುಂಟುಮಾಡುತ್ತದೆ. ಹೊತ್ತಿಗೆ ಒಂದರಿಂದ ಒಂದೂವರೆ ತೊಲೆಯವರೆಗೆ ಹಾಲು, ಸಕ್ಕರೆ, ಬೆಲ್ಲ, ತುಪ್ಪಗಳ ಅನುಪಾನಗಳನ್ನು ಸಂದರ್ಭೋಚಿತವಾಗಿ ಅಳವಡಿಸಬೇಕು.

34. **ಎತ್ತು ನಾಲಿಗೆ**—ಇದು ಲಘು, ಸ್ನಿಗ್ಧ, ಮಧುರ, ತಿಕ್ತ, ವಿಪಾಕದಲ್ಲೂ ಮಧುರವಿದ್ದು ಶೀತವೀರ್ಯಯುಕ್ತವಾಗಿರುತ್ತದೆ, ಇದರಲ್ಲಿ ವಾತಪಿತ್ತ ಶಾಮಕ, ಕಫನಿಸ್ಸಾರಕ, ಪ್ರತಿಶ್ಯಾಯ, ಕಾಸ, ಶ್ವಾಸ ಮತ್ತು ಇತರ ಕಫರೋಗ ಪರಿಹಾರಕ ಶಕ್ತಿ ಇದೆ. ಇದು ಅನುಲೋಮನವೂ, ಮೃದುವಿರೇಚಕವೂ, ರಕ್ತದೋಷಕವೂ, ಮೂತ್ರಲವೂ, ಉನ್ಮಾದ, ಹೃದ್ದೌರ್ಬಲ್ಯ, ಉಪದಂಶ, ಆಮವಾತ, ಉರೋ ವಿದಾಹ ಮೂತ್ರಕೃಚ್ಛ್ರ, ಪಾರ್ಶ್ವಶೂಲೆ ಮತ್ತು ಜ್ವರನಿವಾರಕವೂ ಆಗಿದೆ. ಇದರ ಎಲೆ 25 ರಿಂದ 30 ಗುಂಜಿ ತೂಕವನ್ನೂ, ಹುವ್ವನ್ನು 15 ರಿಂದ 20 ಗುಂಜಿತೂಕ ವನ್ನೂ ಕೊಡಬೇಕೆಂದು ಹೇಳಲಾಗಿದೆ. ಇದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಇದನ್ನು ಸೇವಿಸುವುದು ಪ್ಲೀಹಾದಿರೋಗಗಳಲ್ಲಿ ಅಹಿತಕರವೆಂದು ತಿಳಿಯಲಾಗಿದೆ; ಈ ಅಹಿತ ನಿವಾರಣೆಗಾಗಿ ಗುಲ್ಕಂದ್ ಅಥವಾ ಪ್ರಿಗಂಧವನ್ನು ಕೊಡಬೇಕು.

35. **ಏಲಕ್ಕಿ**—ಇದರಲ್ಲಿ ಸಣ್ಣದು, ದೊಡ್ಡದೆಂಬ ಎರಡು ಜಾತಿಗಳಿವೆ. ಔಷಧಗಳಿಗೆ ವಿಶೇಷವಾಗಿ ಸಣ್ಣ ಜಾತಿಯವುಗಳನ್ನೇ ಬಳಸುವ ಕ್ರಮವಿದೆ. ಇದು ದೀಪಕ, ಪಾಚಕ, ವಾತನಾಶಕ ಮತ್ತು ಉತ್ತೇಜಕವಿದ್ದು ಸುಗಂಧಿತವೂ, ರುಚಿ ದಾಯಕವೂ ಆಗಿರುತ್ತದೆ. ಇದು ರಸದಲ್ಲೂ, ಪರಿಪಾಕದಲ್ಲೂ ಕೂಡ ಕಾರವಾಗಿ ರುತ್ತದೆ. ಇದರಲ್ಲಿ ಕಾಸ, ಶ್ವಾಸ, ಕ್ಷಯ; ವಮನ, ಮೂತ್ರದತಡೆ, ಬಾಯಾರಿಕೆ ಮಲಬದ್ಧತೆ, ಶೂಲೆ, ಹೃದಯವಿಕಾರ, ವಿಷಬಾಧೆಗಳನ್ನು ಪರಿಹರಿಸುವಂತಹ ಗುಣ ವಿಶೇಷಗಳಿವೆ. ಇದರ ಬೀಜಗಳನ್ನು ಕಾಯಿಯಿಂದ ಪ್ರತ್ಯೇಕಿಸಿ ಉಪ ಯೋಗಿಸುವುದು ಕ್ರಮ.

36. **ಒಂದೆಲಗ(ಬ್ರಾಹ್ಮೀ)**—ಇದು ಕಹಿ, ಒಗರು ಗುಣಗಳಿಂದ ಕೂಡಿದ ಕಫಘ್ನವೂ, ಅಗ್ನಿವರ್ಧಕವೂ, ಕ್ರಿಮಿನಾಶಕವೂ ಕೂಡ ಆಗಿರುತ್ತದೆ. ಇದರಲ್ಲಿ ಜ್ಞಾನ ತಂತುಗಳ ವಿಕಾರಗಳನ್ನು ನಿವಾರಿಸಿಮಾಡಿ ಸ್ಮರಣಶಕ್ತಿಯನ್ನು ಹೆಚ್ಚಿಸುವ ಸಾಮರ್ಥ್ಯ ವಿದೆ. [illegible] ಹುಣ್ಣು, ಗಂಡಮಾಲೆ ಕುಷ್ಠಗಳ ಮೇಲೂ ಇದು ಪರಿಣಾಮಕಾರಿ ಯಾದ ಕೆಲಸವನ್ನು ಮಾಡುತ್ತದೆ. ಚರ್ಮ, ಕೂದಲು ಉಗುರುಗಳನ್ನು ಜಾಗ್ರತೆ

ಯಾಗಿ ಬೆಳೆಯಿಸುವ ಶಕ್ತಿ ಇದಕ್ಕಿದೆ. ಶ್ವಾಸಕಾಸ, ಬಾವು, ಹುಚ್ಚು, ಮೂರ್ಛೆ, ಸ್ವರ ಭಂಗಗಳು ಇದರಿಂದ ಪರಿಹಾರವಾಗುತ್ತವೆ. ಇದನ್ನು ಸ್ವರಸ, ಕಷಾಯ ಚೂರ್ಣಗಳ ರೂಪದಲ್ಲಿ ಉಪಯೋಗಿಸುವ ಪದ್ಧತಿಯಿದೆ. 5–10 ಗುಂಜಿಯಿಂದ 25ಗುಂಜಿಯವರೆಗೆ ಚೂರ್ಣವನ್ನೂ 1 ತೊಲದವರೆಗೆ ರಸವನ್ನೂ, ಜೇನು, ತುಪ್ಪಗಳ ಅನುಪಾನದಲ್ಲಿ ಕೊಡುವಂತೆ ಹೇಳಿದೆ,

**37. ಅಂಜೂರ**—ಇದು ಅತಿಮಧುರವೂ, ಶೀತವೀರ್ಯವುಳ್ಳದ್ದೂ ಆಗಿದೆ. ಆದರೆ ಶ್ಲೇಷ್ಮ ಮತ್ತು ಆಮವಾತಕಾರಕವಾಗಿದೆ; ಇದು ಬಹು ರುಚಿಕರವಾದ ಫಲವಾದರೂ ಸುಲಭವಾಗಿ ಜೀರ್ಣವಾಗುವುದಿಲ್ಲ, ಇದರಲ್ಲಿ ವಾತ, ಕ್ರಿಮಿ, ಶೂಲೆ ಹೃತ್ಪೀಡೆ,ರಕ್ತಪಿತ್ತ, ರಕ್ತವಿಕಾರಗಳನ್ನು ಪರಿಹಾರಮಾಡತಕ್ಕ ಸಾಮರ್ಥ್ಯವಿದೆ. ಮುಖರೋಗಗಳನ್ನು ದೂರಮಾಡುತ್ತದೆ. ಮೂಗಿನಿಂದ ರಕ್ತ ಸುರಿಯುವುದನ್ನು ತಡೆಯುತ್ತದೆ. ಇದರಲ್ಲಿ ಇತರ ಎಲ್ಲ ವಸ್ತುಗಳಿಗಿಂತ ಅತಿ ಹೆಚ್ಚಿನ ಶರೀರ ಪೋಷಣ ದ್ರವ್ಯಗಳಿವೆ. ಮೂತ್ರದೋಷ, ಪ್ರದರರೋಗ, ಯಕೃತ್—ಪ್ಲೀಹಗಳ ವಿಕಾರಗಳನ್ನು ದೂರಗೊಳಿಸುತ್ತದೆ. ಆದರೆ ತಮ್ಮ ತಮ್ಮ ಪಚನಶಕ್ತಿಯನ್ನು ನೋಡಿಕೊಂಡು ಸೇವಿಸಬೇಕು. ಉತ್ತುತ್ತೆ, ಖರ್ಜೂರಗಳಂತೆಯೇ ಸಿಹಿಯಾದರೂ ಇದನ್ನು ಮಧುಮೇಹ ರೋಗಿಗಳು ಧಾರಾಳವಾಗಿ ತಿನ್ನಬಹುದು; ದೇಹಸ್ವಾಸ್ಥ್ಯದ ದೃಷ್ಟಿಯಿಂದ ಇದೊಂದು ಒಳ್ಳೆಯ ಆಹಾರ ವಸ್ತು.

**38. ಅಂತರಗಂಗೆ**—ಇದರಲ್ಲಿ–ಸಣ್ಣ ಮತ್ತು ದೊಡ್ಡ–ಎರಡು ಜಾತಿಗಳುಂಟು ಆದರೆ ಎರಡರ ಗುಣಧರ್ಮಗಳೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಆಗಿದೆ. ಇದು ಲಘುವೂ, ರೂಕ್ಷವೂ, ತಿಕ್ತವೂ, ಮಧುರವೂ ಮತ್ತು ವಿಪಾಕದಲ್ಲೂ ಮಧುರವೇ ಇದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ. ಇದರಲ್ಲಿ ತ್ರಿದೋಷ ಶಾಮಕ, ಅನುಲೋಮನ, ಮೃದುವಿರೇಚನ, ಕಫನಿಸ್ಸಾರಕ, ಮೂತ್ರಲ, ದಾಹ ಪ್ರಶಮನ, ಮತ್ತು ರಕ್ತಸ್ತಂಭಕ ಗುಣವಿರುತ್ತದೆ, ಇದರ ಪಂಚಾಂಗದ ಭಸ್ಮವನ್ನು ಅಥವಾ ಇದರಿಂದ ಸಿದ್ಧವಾದ ಕ್ಷಾರವನ್ನು ಮತ್ತು ಸ್ವರಸವನ್ನು ಔಷಧ ರೂಪದಲ್ಲಿ ಉಪಯೋಗಿಸುವ ಕ್ರಮವಿದೆ. ಇದರ ಕ್ಷಾರವನ್ನು 10 ಗುಂಜಿಯಿಂದ15 20 ಗುಂಜಿಯವರೆಗೆ ಹಸುವಿನ ತುಪ್ಪದಲ್ಲಿ ಅಥವಾ ಸ್ವರಸವನ್ನು ತೆಂಗಿನಕಾಯಿಯ ಹಾಲಿನ ಅನುಪಾನದಲ್ಲಿ ಕೊಡುವ ಕ್ರಮವಿದೆ.

**39. ಕಕ್ಕೆಗಿಡ**—ಇದರ ಪಂಚಮೂಲಗಳೂ ವೈದ್ಯಕೀಯ ಚಿಕಿತ್ಸೆಗೆ ಬಂದರೂ ಕಾಯಿಯೊಳಗಿನ ತೊಪ್ಪನ್ನೇ ಹೆಚ್ಚಾಗಿ ಉಪಯೋಗಿಸುವುದುಂಟು; ಈ ತೊಪ್ಪು ವಿರೇಚನಕಾರಿ, ಹೆಚ್ಚಿನ ಪ್ರಮಾಣದಲ್ಲಿ ಬಳಸಿದಾಗವಾಂತಿ,ಭೇದಿಯನ್ನುಂಟು

ಮಾಡುತ್ತದೆ. ಇದನ್ನು ಸೋನಾಮುಖಿಯೊಂದಿಗೆ ಅಥವಾ ಅಳಲೇಕಾಯಿ ಚೂರ್ಣದೊಂದಿಗೆ ಅಲ್ಪಪ್ರಮಾಣದಲ್ಲಿ ಬೆರಸಿ ಉಪಯೋಗಿಸುವ ರೂಢಿಯಿದೆ, ಹೊತ್ತಿಗೆ ಕಾಲುತೊಲೆಯಿಂದ ಅರ್ಧ ತೊಲೆಯವರೆಗೆ ಬಿಸಿನೀರಿನಲ್ಲಿ ಸೇವಿಸಬೇಕು. ಜೊತೆಗೆ ಸೋನಮುಖಿಚೂರ್ಣ ಅಥವಾ ಅಳಲೇಕಾಯಿಚೂರ್ಣ ಬೆರೆಸಲು ಹೇಳಿದೆ.

**40. ಕಟುಕ ರೋಹಿಣಿ**—ಇದರಲ್ಲಿ ಎರಡು ಭೇದಗಳಿವೆ, ಒಂದು ಬಿಳಿಯದು; ಮತ್ತೊಂದು ಕರಿಯದು. ಕಟುಕರೋಹಿಣಿಯು ಪಾಚಕ, ದೀಪಕ ಕ್ರಿಮಿಘ್ನ ಮತ್ತು ಜ್ವರಘ್ನವಾಗಿರುತ್ತದೆ. ಮಂದಾಗ್ನಿಯನ್ನು ಹೋಗಲಾಡಿಸಿ ಜೀರ್ಣ ಶಕ್ತಿಯನ್ನು ಹೆಚ್ಚಿಸುತ್ತದೆ; ಜ್ವರ, ಕಾಮಾಲೆ, ಬಿಕ್ಕಳಿಕೆ, ಕೆಮ್ಮುಗಳನ್ನು ನಿವಾರಿಸುತ್ತದೆ. ಮಧುಮೇಹ, ಕುಷ್ಠ ಮತ್ತು ಅರ್ಬುದದ ಮೇಲೆ ಸತ್ಪರಿಣಾಮ ವನ್ನುಂಟುಮಾಡುತ್ತದೆ. ಇದರ ಚೂರ್ಣವನ್ನು 13 ಗುಂಜಿಯಿಂದ 15–24 ಗುಂಜಿಯವರೆಗೆ ಜೇನು, ಬೆಲ್ಲಗಳ ಅನುಪಾನದಲ್ಲಿ ಕೊಡಬೇಕು.

**41. ಕರಿಬೇವು**—ಇದು ಅಪಚನ ಮಂದಾಗ್ನಿಗಳನ್ನು ನಿವಾರಿಸುತ್ತದೆ; ಮೂತ್ರದೋಷವನ್ನು ಪರಿಹರಿಸುತ್ತದೆ; ಬಾಯಿಗೆ ರುಚಿಯನ್ನುಂಟುಮಾಡುತ್ತದೆ. ಬಾಯಾರಿಕೆಯನ್ನು ನೀಗಿಸುತ್ತದೆ. ಶೀತ, ಕಫಗಳನ್ನೂ, ವಾಕರಿಕೆಯನ್ನೂ ನಿವಾರಣೆ ಮಾಡುತ್ತದೆ. ಇದು ಕ್ರಿಮಿಘ್ನವೂ ಹೌದು. ಇದರ ಎಲೆಗಳನ್ನು ಚೂರ್ಣಿಸಿ 20 ರಿಂದ 25 ಗುಂಜಿಯವರೆಗೆ ಬಿಸಿನೀರಿನ ಅನುಪಾನದಲ್ಲಿ ತೆಗೆದುಕೊಳ್ಳುವ ಕ್ರಮವಿದೆ. ಇದು ಬಲ್ಯವೂ, ವೀರ್ಯವರ್ಧಕವೂ ಆಗಿದೆ. ಇದು ಪೌಷ್ಟಿಕ, ರಕ್ತಪ್ರಸಾದಕ ಮತ್ತು ಸಂಗ್ರಹಿಣೀ, ಶೋಥ, ಬಾಯಿದುರ್ಗಂಧ, ವಿಷವಿಕಾರ ಮೊದಲಾದುವುಗಳಲ್ಲಿ ಉಪಯೋಗವಾಗುತ್ತದೆ, ಆಮ ಮತ್ತು ರಕ್ತಭೇದಿಗಳಲ್ಲೂ ರಕ್ತಾರ್ಶ, ವಾಂತಿ ಇತ್ಯಾದಿಗಳಲ್ಲಿ ಇದರ ಹಸಿರು ಎಲೆಗಳನ್ನು ನೀರಿನಲ್ಲಿ ಚೆನ್ನಾಗಿ ಅರೆದು ಕುಡಿಯುತ್ತಾರೆ. ಹಾಗೆಯೇ ಅಗಿದೂ ತಿನ್ನುತ್ತಾರೆ.

**42. ಕರ್ಪೂರ**—ಕರ್ಪೂರವು ಸ್ವೇದನವನ್ನುಂಟುಮಾಡಿಸುತ್ತದೆ; ಜ್ವರವನ್ನು ಪರಿಹರಿಸುತ್ತದೆ. ಇದು ವೇದನಾಹರವೂ, ಕಫಘ್ನವೂ, ಕ್ರಿಮಿನಾಶಕವೂ, ದೀಪನಕಾರಿಯೂ ಆಗಿದೆ. ಕಾಲರಾ ಸಿಡುಬು, ಸೀತಾಳಿ, ಸಂಗ್ರಹಣಿ, ಸಂಧಿವಾತ, ನವಜ್ವರಗಳಲ್ಲೂ ಮತ್ತುಸ್ತ್ರೀಯರ ಆರ್ತವ ದೋಷದಮೇಲೂ ಕರ್ಪೂರವುಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ಕರ್ಪೂರವನ್ನು ಬಾಹ್ಯಲೇಪನಕ್ಕೂ ಮತ್ತು ಹೊಟ್ಟೆಯೊಳಗೂ ಕೂಡ ಉಪಯೋಗಿಸಲು ಬರುತ್ತದೆ: ಹೊಟ್ಟೆಯೊಳಗೆ ಕೊಡುವ ಸಂದರ್ಭದಲ್ಲಿ ಹಸುವಿನ ಹಾಲಿನಲ್ಲಿ ಶುದ್ಧಿ ಮಾಡಿಯೇ ಉಪಯೋಗಿಸ ಬೇಕು. ಹೊತ್ತಿಗೆ 2ರಿಂದ 4 ಗುಂಜಿಯವರೆಗೆ ಸಕ್ಕರೆ,ಬೆಲ್ಲ,ಬಿಸಿನೀರು,ವೀಳ್ಯದೆಲೆಯ ರಸ–ಇವುಗಳಲ್ಲಿ ಯಾವುದಾದರೊಂದನ್ನು ಅನುಪಾನವಾಗಿ ತೆಗೆದುಕೊಳ್ಳಬೇಕು.

43. **ಕಸ್ತೂರಿ ಅರಿಸಿನ**—ಇದು ಶೀತವೀರ್ಯವುಳ್ಳದ್ದು. ಇದು ವಾತಾನು ಲೋಮಕವೂ, ಉತ್ತೇಜಕವೂ, ಬಲ್ಯವೂ, ಕಫವಾತಶಾಮಕವೂ ಮತ್ತು ದೀಪಕವೂ ಆಗಿರುತ್ತದೆ, ಇದು ರೇಚಕವೂ, ಶೂಲನಿವಾರಕವೂ, ಗ್ರಾಹಿಯೂ ಆಗಿರುವುದರಿಂದ ವಾಕರಿಕೆ, ಅರುಚಿ, ಅಗ್ನಿಮಾಂಧ್ಯ, ಉದರಶೂಲೆ, ಅತಿಸಾರಗಳನ್ನು ಪರಿಹರಿಸುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ; ಅಲ್ಲದೆ ಉತ್ತೇಜಕವೂ, ರಕ್ತ ಶೋಧಕವೂ ಆಗಿರುವುದರಿಂದ ಹೃದಯ ದೌರ್ಬಲ್ಯವನ್ನೂ, ರಕ್ತವಿಕಾರಗಳನ್ನೂ ಪರಿಹರಿಸುವುದಲ್ಲದೆ ಇಂದ್ರಿಯ ಶೈಥಿಲ್ಯವನ್ನೂ ನಿವಾರಿಸುತ್ತದೆ; ಕಾಸಶ್ವಾಸ, ಬಿಕ್ಕಳಿಕೆ, ಕಜ್ಜಿ, ತುರಿ, ತೀಟೆ, ವ್ರಣಗಳು ಇದರಿಂದ ನಿವಾರಣೆಯಾಗುತ್ತವೆ. ಚರ್ಮವು ಕಾಂತಿಯುಕ್ತವಾಗುತ್ತದೆ. 10 ರಿಂದ 15, 20, ಗುಂಜಿಯವರೆಗೆ ಬೆಲ್ಲ, ತುಪ್ಪ ಅಥವಾ ನೀರಿನ ಅನುಪಾನದಲ್ಲಿ ಕೊಡುವ ಕ್ರಮವಿದೆ.

44. **ಕಚೋರ**—ಕಹಿರಸವುಳ್ಳದ್ದಾಗಿ, ಉಷ್ಣವೀರ್ಯವುಳ್ಳ ಕಚೋರವು ವಿಪಾಕದಲ್ಲಿ ಲಘುವೂ, ತೀಕ್ಷ್ಣವೂ ಆಗಿರುತ್ತದೆ. ಇದು ಪಾಚಕವೂ, ರುಚಿಕಾರಕವೂ, ಹೃದಯಕ್ಕೆ ಶಕ್ತಿ ನೀಡುವಂತಹುದೂ ಆಗಿದ್ದು ಮುಖಕ್ಕೆ ಕಾಂತಿಯನ್ನುಂಟುಮಾಡಿಸುತ್ತದೆ. ಇದರಿಂದ ಕಫ, ವಾತ, ಪ್ಲೀಹ, ಗುಲ್ಮ ಮೂಲ ವ್ಯಾಧಿ ಕುಷ್ಠ, ಕಾಸಶ್ವಾಸ, ಕ್ರಿಮಿರೋಗ, ಬಿಕ್ಕಳಿಕೆ, ವಾತಜ್ವರ, ಅಜೀರ್ಣ, ಅಪಸ್ಮಾರ, ಗಂಡಮಾಲೆ, ಗಲಗಂಡ ಮೊದಲಾದವುಗಳು ನಿವಾರಣೆಯಾಗುತ್ತವೆ. ಇದನ್ನು ಶುಂಠಿ, ಹಿಪ್ಪಲಿ, ಮೆಣಸು, ತುಪ್ಪ ಅಥವಾ ನೀರಿನಲ್ಲಿ 10 ರಿಂದ 15 ಗುಂಜಿಯವರೆಗೆ ಕೊಡುವ ಕ್ರಮವಿದೆ.

45. **ಕಬ್ಬು**—ಇದರಲ್ಲಿ ಹಲವು ಬಗೆಗಳುಂಟು; ಆದರೆ ಇವೆಲ್ಲವುಗಳ ಗುಣಧರ್ಮಗಳೂ ಒಂದೇ ಎಂದು ತಿಳಿಯಬಹುದು. ಇದು ಶೀತವೀರ್ಯವುಳ್ಳದ್ದಾಗಿ ವಿಪಾಕದಲ್ಲಿ ಮಧುರವಾಗಿರುತ್ತದೆ. ಅಲ್ಲದೆ ಇದು ಉಷ್ಣವೂ, ವೃಷ್ಯವೂ, ಬ್ರುಂಹಣವೂ, ಸ್ನಿಗ್ಧವೂ, ಬಲ್ಯವೂ, ಅತ್ಯಂತ ಶಾಮಕವೂ ಆಗಿದ್ದು ಇಂದ್ರಿಯಗಳಿಗೆ ತೃಪ್ತಿಯನ್ನೂ, ಮೇದಸ್ಸಿಗೆ ಚೈತನ್ಯವನ್ನೂ ಉಂಟುಮಾಡುತ್ತದೆ. ಕಫಕಾರಕವೂ ಮೂತ್ರಶೋಧಕವೂ, ಕಾಂತಿವರ್ಧಕವೂ, ಕ್ರಿಮಿಜನಕವೂ, ಪಿತ್ತಶಾಮಕವೂ ರಕ್ತ ಮತ್ತು ವಾತಪಿತ್ತಗಳ ರೋಗನಾಶಕವೂ ಆಗಿರುತ್ತದೆ. ಊಟಕ್ಕೆ ಮೊದಲು ಕಬ್ಬಿನ ರಸವನ್ನು ಕುಡಿಯುವುದರಿಂದ ಪಿತ್ತ ನಿವಾರಣೆಯಾಗುತ್ತದೆ; ಊಟದ ಮಧ್ಯದಲ್ಲಿ ಕಬ್ಬಿನ ರಸವನ್ನು ಕುಡಿಯುವುದರಿಂದ ದೇಹಕ್ಕೆ ಜಡತ್ವವುಂಟಾಗುತ್ತದೆ ಮತ್ತು ಊಟದ ನಂತರ ಇದನ್ನು ಕುಡಿಯುವುದರಿಂದ ಆಹಾರವು ಚೆನ್ನಾಗಿ ಜೀರ್ಣವಾಗುತ್ತದೆ. ಇದನ್ನು ಹಿತಮಿತವಾಗಿ ಸೇವಿಸುವುದು ಆರೋಗ್ಯಕ್ಕೆ ಒಳ್ಳೆಯದು; ಅತಿ ಸೇವನೆಯು ಎಂದೂ ಕೇಡೇ.

**45. ಕಹಿಪಡವಲ**—ಇದು ವಿರೇಚಕವೂ, ವಮನಕಾರಕವೂ, ರಕ್ತಶೋಧಕವೂ ಆಗಿದೆ. ಅಜೀರ್ಣವನ್ನೂ, ಅಪಚನವನ್ನೂ ಪರಿಹರಿಸುತ್ತದೆ. ಇದರ ಎಲೆಯ ಸ್ವರಸವು ವಮನವನ್ನುಂಟುಮಾಡುತ್ತದೆ. ಇದರ ಪಂಚಾಂಗವು ಜ್ವರಘ್ನವೂ, ಹೃದ್ಯವೂ (ಹೃದಯಕ್ಕೆ ಬಲಕೊಡುವಂತಹುದು), ಪೌಷ್ಟಿಕವೂ ಆಗಿರುತ್ತದೆ. ಇದರ ಬೀಜವು ಕ್ರಿಮಿಘ್ನವೂ, ಜ್ವರಘ್ನವೂ, ಆಗಿದೆ; ಮತ್ತು ಆಮಾಶಯದ ವಿಕಾರಗಳನ್ನು ನಿವಾರಿಸುತ್ತದೆ; ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಟ್ಟರೆ ವಾಕರಿಕೆಯನ್ನುಂಟು-ಮಾಡುತ್ತದೆ. ಸ್ವರಸ ಅಥವಾ ಕಷಾಯರೂಪದಲ್ಲಿ ವಯೋಮಾನಕ್ಕೆ ತಕ್ಕಂತೆ ಇದನ್ನು ಕೊಡುತ್ತಿರಬೇಕು. ಕಾಲು ತೊಲೆಯಿಂದ ಅರ್ಧ ತೊಲೆಯ ಪ್ರಮಾಣದಲ್ಲಿ ಇದನ್ನು ಕೊಡಬೇಕೆಂದಿದೆ.

**46. ಕಹಿಸೋರೆ**—ಇದು ಲಘುವೂ, ರೂಕ್ಷವೂ, ತೀಕ್ಷ್ಣವೂ, ಕಹಿಯೂ ಆಗಿದ್ದು ವಿಪಾಕದಲ್ಲಿಯೂ ಕಹಿಯೇ ಆಗಿ ಶೀತವೀರ್ಯವುಳ್ಳದ್ದಾಗಿರುತ್ತದೆ. (ಆದರೆ ಕೆಲವರ ಅಭಿಪ್ರಾಯದಲ್ಲಿ ಇದು ಉಷ್ಣವೀರ್ಯವೆಂಬುದಾಗಿದೆ) ಈ ವನಸ್ಪತಿಯಲ್ಲಿ ಕೂಡಲೇ ತೆಳ್ಳಗಿನ ಭೇದಿಮಾಡಿಸುವ ಗುಣವಿದೆ; ಮತ್ತು ವಾಕರಿಕೆಯನ್ನು ಉಂಟುಮಾಡುತ್ತದೆ. ಇದು ರಕ್ತಶೋಧಕವೂ, ವೇದನಾಹರವೂ, ಪಿತ್ತ ಕಫನಿವಾರಕವೂ ಆಗಿರುತ್ತದೆ. ಅತಿ ಚಿಕ್ಕ ಪ್ರಮಾಣವೂ ವಾಂತಿಯನ್ನೂ, ಭೇದಿಯನ್ನೂ ಉಂಟುಮಾಡಿಸಿ ಕಫವನ್ನು ಹೊರಕ್ಕೆ ಹಾಕುತ್ತದೆ. ಇದರಿಂದ ಶಿರೋ ವಿರೇಚನೆಯೂ ಆಗುತ್ತದೆ. ಜಂತುಬಾಧೆ, ಕುಷ್ಠ, ಜ್ವರ, ವ್ರಣ, ವಿಷಬಾಧೆಗಳೂ ಕೂಡಾ ಇದರಿಂದ ನಿವಾರಣೆಯಾಗುತ್ತವೆ. ವಿಷವಿಕಾರ, ಪಿತ್ತವಿಕಾರಗಳ ನಿವಾರಣೆಯಲ್ಲಿ ವಾಂತಿಯನ್ನು ಮಾಡಿಸಲು ಇದು ಅತಿ ಪ್ರಯೋಜನಕಾರಿ. ಇದರ ಕಾಯಿ, ಬೀಜ, ಬಳ್ಳಿ, ಎಲೆ, ಬೇರು(ಪಂಚಾಂಗ)ಗಳೆಲ್ಲವೂ ಔಷಧ ದ್ರವ್ಯಗಳಾಗಿರು-ತ್ತವೆ. ಇದನ್ನು ಕಾಲುತೊಲೆಯಿಂದ ಅರ್ಧ ತೊಲೆಯವರೆಗೆ ಅನುಪಾನ ಭೇದದಿಂದ ಕೊಡಬಹುದು.

**47. ಕರಿತುಲಸಿ**—ಇದರಲ್ಲಿ ಬಿಳಿಯದು (ಶ್ರೀತುಲಸಿ), ಕಪ್ಪು (ಕೃಷ್ಣ ತುಲಸಿ)ಮತ್ತು ನಾಯಿ ತುಲಸಿಗಳೆಂದು ಮೂರು ಬಗೆಗಳುಂಟು. ಆದರೆ ಔಷಧಿಗಳಲ್ಲಿ ಕೃಷ್ಣ ತುಲಸಿಯನ್ನೇ ಉಪಯೋಗಿಸುವ ರೂಢಿಯಿದೆ. ತುಲಸಿಯ ಬೇರು, ಕಾಂಡ, ಎಲೆ, ಬೀಜಗಳೆಲ್ಲವೂ ಔಷಧ ದ್ರವ್ಯಗಳಾಗಿವೆ. ತುಲಸಿಯು ಉಷ್ಣವೀರ್ಯವಾಗಿದ್ದು ವಾತಘ್ನ,ಕಫಘ್ನ, ಜ್ವರಘ್ನ, ಕ್ರಿಮಿಘ್ನ ಮತ್ತು ವಿಷಘ್ನವೂ ಆಗಿರುತ್ತದೆ. ಇದರ ಬೀಜವು ಮೂತ್ರರೋಗಗಳಲ್ಲಿ ಶಾಮಕವಾಗಿರುವುದು. ಇದು ತೀಕ್ಷ್ಣ, ದಾಹಜನಕ, ಪಿತ್ತಕಾರಕ, ಅಗ್ನಿದೀಪಕ ಮತ್ತು ವಮನ, ದುರ್ಗಂಧ, ಕುಷ್ಠ, ಪಾರ್ಶ್ವಶೂಲ, ರಕ್ತದೋಷ ಮತ್ತು ಭೂತಬಾಧೆಗಳ ಮೇಲೂ ಸತ್ಪರಿಣಾಮ ಬೀರುತ್ತದೆ.

**48. ಕರ್ಕಾಟಕಶೃಂಗಿ**—ಇದು ಲಘುವೂ, ರೂಕ್ಷವೂ, ಕಷಾಯವೂ, ತಿಕ್ತವೂ, ವಿಪಾಕದಲ್ಲಿ ಕಹಿಯೂ ಮತ್ತು ಉಷ್ಣವೀರ್ಯವುಳ್ಳದ್ದೂ ಆಗಿರುತ್ತದೆ ಇದರಲ್ಲಿ ಕಫವಾತಶಾಮಕ, ಕಟುಪೌಷ್ಟಿಕ, ಶೋಧಹಾರಕ, ಗ್ರಾಹಿ, ಕಫಘ್ನ, ಬಿಕ್ಕಳಿಕೆ ನಿಗ್ರಹಣಗಳ ಗುಣವಿರುತ್ತದೆ. ಇದರಿಂದ ವಮನ, ಪಿತ್ತಗಳ ಪರಿಹಾರವಾಗುವುದಲ್ಲದೆ ಇದು ದೀಪನವನ್ನೂ, ವಾತಾನುಲೋಮವನ್ನೂ, ಕಫದವಿಕಾರವನ್ನೂ ನಿವಾರಿಸುತ್ತದೆ. ರಕ್ತದೋಷ, ಊರ್ಧ್ವವಾತ, ಬಾಯಾರಿಕೆ, ಅರುಚಿ ಮೊದಲಾದವುಗಳು ಇದರಿಂದ ಪರಿಹಾರವಾಗುತ್ತವೆ. ಇದನ್ನು ಜೇನುತುಪ್ಪ, ತುಪ್ಪಗಳ ಅನುಪಾನದಲ್ಲಿ 5 ರಿಂದ 10 ಗುಂಜಿಯವರೆಗೆ ಕೊಡುವ ನಿಯಮವಿದೆ.

**49. ಕಂಚುವಾಳ**—ಇದು ಶೀತವೀರ್ಯವುಳ್ಳದ್ದಾಗಿದ್ದು ವಿಪಾಕದಲ್ಲಿ ಕಟುವೂ, ಗ್ರಾಹಿಯೂ ಆಗಿರುತ್ತದೆ; ಅಲ್ಲದೆ ಪಿತ್ತ, ಕಫ, ಕ್ರಿಮಿ, ಕುಷ್ಠ, ಗುದಭ್ರಂಶ, ಗಂಡಮಾಲಾ, ವ್ರಣ, ವಾತರೋಗ, ರಕ್ತವಿಕಾರ, ಫಿರಂಗಿ–ಉಪದಂಶ ಮತ್ತು ವಾತಾದಿರೋಗ ನಿವಾರಕವೂ ಆಗಿದೆ; ಇದು ವಾತಾದಿ ದೋಷಗಳನ್ನು ಮಲದ್ವಾರದಿಂದ ಹೊರಹಾಕುತ್ತದೆ; ಮುಖ್ಯವಾಗಿ ಇದರ ಕ್ರಿಯೆಯು ರಸಗ್ರಂಥಿಗಳ ಮೇಲೂ ಮತ್ತು ಚರ್ಮದಮೇಲೂ ನಡೆಯುತ್ತದೆ. ಇದರಲ್ಲಿ ಬಿಳುಪು, ಹಳದಿ, ನಸುಗೆಂಪು ಹೀಗೆ ಮೂರು ಜಾತಿಗಳಿವೆ. ಆದರೆ ಬಹುತೇಕ ಮೂರರ ಗುಣಧರ್ಮಗಳೂ ಕೆಲಮಟ್ಟಿಗೆ ಒಂದೇ ಆಗಿರುತ್ತವೆ. ಇದರ ಬೀಜದ ಲೇಪನದಿಂದ ವಿಷಜಂತುಗಳ ಕಡಿತದ ವಿಷ ನಿವಾರಣೆಯಾಗುತ್ತದೆ. ಇದರ ನಾರು, ಬೇರು, ಹೂವು, ಎಲೆ, ಬೀಜಗಳೆಲ್ಲವೂ ಔಷಧ ದ್ರವ್ಯಗಳಾಗಿವೆ ಮತ್ತು ಸ್ವರಸ, ಚೂರ್ಣ ಕಷಾಯಗಳ ರೂಪಗಳಲ್ಲಿ ಅವುಗಳನ್ನು ಉಪಯೋಗಿಸಲಾಗುತ್ತದೆ. 5 ರಿಂದ 15 ಗುಂಜಿಯವರೆಗೆ ಚೂರ್ಣವನ್ನು ತಣ್ಣೀರಿನ ಅನುಪಾನದಲ್ಲೂ, 1 ರಿಂದ 2 ತೊಲೆಯವರೆಗೆ ಸ್ವರಸವನ್ನೂ ಕೊಡಲು ಹೇಳಿದೆ.

**50. ಕಹಿಹೀರೆ**—ಇದರಲ್ಲಿ ಎರಡು ಜಾತಿಗಳಿವೆ. ಆದರೆ ಇವೆರಡರ ರಾಸಾಯನಿಕ ಸಂಘಟನೆಯೂ ಒಂದೇ ಎಂಬುದಾಗಿ ಹೇಳಲಾಗಿದೆ. ಇದು ಲಘುವೂ, ರೂಕ್ಷವೂ, ತೀಕ್ಷ್ಣರಸವುಳ್ಳದ್ದೂ ಆಗಿ ವಿಪಾಕದಲ್ಲೂ ಕಹಿಯೇ ಆಗಿರುತ್ತದೆ. ಇದರಲ್ಲಿ ವಮನ ಮತ್ತು ವಿರೇಚಕ ಗುಣಗಳುಂಟು. ಇದು ಕಫಪಿತ್ತ ನಾಶಕವೂ, ರಕ್ತಶೋಧಕವೂ, ಶೋಥಹರವೂ ಆಗಿದ್ದು ಉದರ, ಗುಲ್ಮ, ರಕ್ತವಿಕಾರ, ಪ್ಲೀಹ ವೃದ್ಧಿ, ಕಾಸ, ಶ್ವಾಸ, ಕುಷ್ಠ, ಪಾಂಡು, ಮೂಲವ್ಯಾಧಿಗಳನ್ನು ನಿವಾರಣೆಮಾಡುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಅಲ್ಲದೆ ಕ್ಷಯಜನಿತ ಗ್ರಂಥಿಗಳನ್ನು ಮತ್ತು ಯೋನಿಮಾರ್ಗದ ದೂಷಿತ ಗ್ರಂಥಿಗಳನ್ನು ನಿವಾರಿಸುತ್ತದೆ. ಇದರ ಚೂರ್ಣವನ್ನು 15 ರಿಂದ 20, 25 ಗುಂಜಿಯವರೆಗೆ ಮತ್ತು ರಸವನ್ನು 1, 2 ತೊಲೆಯವರೆಗೂ

ಕೊಡಬೇಕು. ಆದರೂ ಇದು ತೀವ್ರ ವಿರೇಚನಕಾರಿಯಾಗಿರುವುದರಿಂದ ಉಪಯೋಗಿಸುವಾಗ ಅತಿಯಾದ ಜಾಗ್ರತೆಬೇಕು.

**51. ಕಣಿಗಲು**—ಇದರಲ್ಲಿ ಬಿಳಿ, ಕೆಂಪು ಮತ್ತು ನಸುಗೆಂಪುಗಳೆಂಬ ಮುಖ್ಯವಾದ ಮೂರು ಜಾತಿಗಳುಂಟು. ಅದರಲ್ಲೂ ಒಂದೇ ಸುತ್ತಿನವು, ಎರಡು ಸುತ್ತಿನವು, ತುಂಬುದಳದವು ಹೀಗೆ ಪ್ರತಿಯೊಂದರಲ್ಲೂ ಬೇರೆ ಬೇರೆ ಬಗೆಗಳೂ ಇವೆ. ಆದರೆ ರಾಸಾಯನಿಕ ಸಂಘಟನೆಯಲ್ಲಿ ಇವೆಲ್ಲವುಗಳ ಗುಣಧರ್ಮವೂ ಒಂದೇ ಆಗಿರುತ್ತದೆ. ಇದು ಕಹಿರಸಯುಕ್ತವೂ, ಲಘುವೂ, ಕ್ಷಾರವೂ, ವಿಪಾಕದಲ್ಲಿ ಕಹಿಯೂ, ಉಷ್ಣವೀರ್ಯವುಳ್ಳದ್ದೂ ಆಗಿದ್ದು ಇದರಲ್ಲಿ ದೀಪನ, ಭೇಧನ, ಕಫವಾತನಾಶಕ, ತ್ವಗ್ರೋಗಹರ, ಕುಷ್ಠ ಶೋಥಹರ, ವ್ರಣಶೋಧನ ವ್ರಣ ರೋಪಣ, ಮೂತ್ರಲ, ಸ್ವೇದಜನನ, ಜ್ವರಘ್ನ, ನಿಯತಕಾಲಿಕ ಜ್ವರ ಪ್ರತಿಬಂಧಕ, ನೇತ್ರಾಭಿಷ್ಯಂಧನಾಶಕ, ಕಾಮೋದ್ದೀಪಕ ಮತ್ತು ಸರ್ಪವಿಷಪರಿಹಾರಕ ಶಕ್ತಿಯೂ ಇರುತ್ತದೆ; ಆದರೆ ಇದನ್ನು ಹೊಟ್ಟೆಯೊಳಗೆ ಕೊಡಬೇಕಾದ ಸಂದರ್ಭದಲ್ಲಿ ಹಸುವಿನ ಹಾಲಿನಲ್ಲಿ ಡೋಲಾಯಂತ್ರದಲ್ಲಿ ಬೇಯಿಸಿ ಶುದ್ಧಿಮಾಡಿಯೇ ಕೊಡಬೇಕಲ್ಲದೆ ಎಂದೂ ಹಾಗೆಯೇ ಕೊಡಬಾರದು; ಯಾಕೆಂದರೆ ಇದು ವಿಷಯುಕ್ತ ದ್ರವ್ಯವಾಗಿದೆ. ಇದರ ಬೇರೂ, ತೊಗಟೆಯೂ ವಿಶೇಷವಾಗಿ ಹೊರಗಿನ ಲೇಪನಕ್ಕೆ ಬರುತ್ತದೆ. ಬೇರನ್ನು ಶುದ್ಧಿಮಾಡಿದ ಮೇಲೂ ಅತಿ ಕಡಿಮೆಯ ಪ್ರಮಾಣದಲ್ಲಿ ಎಂದರೆ 2 ಗುಂಜಿಯಿಂದ 5 ಗುಂಜಿಯವರೆಗೆ ಮಾತ್ರ ಕೊಡಬೇಕಲ್ಲದೆ ಹೆಚ್ಚಿಗೆ ಕೊಡಲೇ ಕೂಡದು.

**52. ಕಳ್ಳಿ**—ಇದರಲ್ಲಿ ಹಲವು ಬಗೆಗಳುಂಟು. ಇದು ಲಘುವೂ (ಕೆಲವರ ಅಭಿಪ್ರಾಯದಲ್ಲಿ ಗುರುವೆಂದೂ ಇದೆ), ಸ್ನಿಗ್ಧವೂ, ತೀಕ್ಷ್ಣವೂ, ಕಟುವೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಅಲ್ಲದೆ ಇದರಲ್ಲಿ ವಾತಕಫನಿವಾರಕ, ದೀಪಕ, ರೇಚಕ, ರಕ್ತಶೋಧಕ, ಕಫನಿಸ್ಸಾರಕ, ವ್ರಣಶೋಧಕ, ತ್ವಗ್ರೋಗನಾಶಕ ಸಾಮರ್ಥ್ಯವಿರುತ್ತದೆ. ಮೇದೋರೋಗ, ಉಪದಂಶ, ಆಮವಾತ, ವಾತ್ರರಕ್ತ, ಶೋಥ, ಶೂಲೆ, ಮೊಲಾದುವುಗಳನ್ನು ಇದು ಪರಿಹರಿಸುತ್ತದೆ. ಇದರ ಕಾಂಡ, ಹಾಲು, ಎಲೆಗಳೆಲ್ಲವೂ ಔಷಧದ್ರವ್ಯಗಳಾಗಿವೆ. ಆದರೆ ಇದನ್ನು ಶುದ್ಧಿಮಾಡಿಕೊಳ್ಳದೆ ಉಪಯೋಗಿಸಬಾರದೆಂಬುದನ್ನು ಮರೆಯಬಾರದು; ಬೃಹತ್ಪಂಚಮೂಲದಲ್ಲಿ ಇದರ ಶುದ್ಧಿಯನ್ನು ಹೇಳಿದೆ.

**53. ಕಗ್ಗಲಿ** (ಕರೀಮರ)—ಇದರ ತೊಗಟೆ, ತಿರುಳು, ಸಾರ (ಕಾಚು), ಹೂ ಮೊದಲಾದುವುಗಳೆಲ್ಲವೂ ಔಷಧಕ್ಕೆ ಬರುತ್ತದೆ. ಇದು ಲಘುವೂ, ತಿಕ್ತವೂ, ವಿಪಾಕದಲ್ಲಿ ಕಹಿಯೂ ಮತ್ತು ಶೀತವೀರ್ಯವುಳ್ಳದ್ದೂ ಆಗಿದ್ದು ಪ್ರಭಾವದಲ್ಲಿ

ಕುಷ್ಠಘ್ನವಾಗಿರುತ್ತದೆ. ಇದು ಕಫಪಿತ್ತಶಾಮಕವೂ, ಹಲ್ಲುಗಳಿಗೆ ಹಿತಕರವೂ, ಸ್ತಂಭಕವೂ, ಕ್ರಿಮಿಘ್ನವೂ, ರಕ್ತಪ್ರಸಾದನವೂ, ರಕ್ತವರ್ಧಕವೂ, ಮೂತ್ರಸಂಗ್ರಹಣೀಯವೂ ಶುಕ್ರಶೋಧಕವೂ, ಗರ್ಭಾಶಯ ಶೈಥಿಲ್ಯಕರವೂ ಆಗಿದ್ದು ಶೋಷ, ಕಫ, ಕಂಡ, ಜ್ವರ, ಶ್ವೇತಕುಷ್ಠ (ತೊನ್ನು), ಅರುಚಿ, ಅತಿಸಾರ, ರಕ್ತಪಿತ್ತ, ಪಾಂಡು, ಕಾಸ, ಪ್ರಮೇಹ, ಪ್ರದರ, ಯೋನಿಶೈಥಿಲ್ಯ, ಕಾಮಾತಿಶಯ, ರಕ್ತದೋಷ, ಮೇದೋರೋಗ(ಮೇದೋವೃದ್ಧಿ), ಪ್ಲೀಹವೃದ್ಧಿ, ವ್ರಣ ಮೊದಲಾದವುಗಳನ್ನು ನಿವಾರಿಸುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ. ಇದರ ಕಷಾಯವನ್ನು 2 ರಿಂದ 4 ತೊಲೆಯವರೆಗೂ, ತೆಗೆದುಕೊಳ್ಳಬೇಕು. ಒಮ್ಮೆಗೇ 10 ತೊಲ ಸಾರವನ್ನು ಕರ್ಪೂರ ಸೇರಿಸಿ ನೀರಿನಲ್ಲಿ ಸೇವಿಸಿದರೆ ನಪುಂಸಕತ್ವವುಂಟಾಗುತ್ತದೆ.

**54. ಕರಬೂಜ**—ಇದು ಶೀತಲವೂ, ಮಧುರವೂ, ಸಮಶೀತೋಷ್ಣವೂ, ಕಿಂಚಿತ್ ಆಮ್ಲವೂ, ವೃಷ್ಯವೂ, ಗುರುವೂ, ರುಚಿಕರವೂ, ಕೋಷ್ಠಶುದ್ಧಿಕರವೂ, ಪಿತ್ತಶಾಮಕವೂ, ಆಗಿದ್ದು ದಾಹ, ತೃಷೆ, ಮೂತ್ರಕೃಚ್ಛ್ರ, ಉನ್ಮಾದ, ರಕ್ತವಿಕಾರ, ಕುಷ್ಠಗಳನ್ನು ನಿವಾರಿಸುತ್ತದೆ. ಚೆನ್ನಾಗಿಹಣ್ಣಾದ ಫಲವು ಯಕೃತ್ತಿನ ಮೇಲೆ ಉತ್ತಮ ಕೆಲಸವನ್ನು ಮಾಡುತ್ತದೆ; ಇದನ್ನು ತಿನ್ನುವುದಕ್ಕೆ ಮೊದಲು ಸ್ವಲ್ಪ ಹೊತ್ತು ಇದನ್ನು ತಣ್ಣೀರಿನಲ್ಲಿ ಮುಳುಗಿಸಿಡುವುದು ಒಳ್ಳೆಯದು. ಬರಿಯ ಹೊಟ್ಟೆಯಲ್ಲಿ ಅಥವಾ ಊಟಕ್ಕೆ ಮೊದಲು ಇದನ್ನುತಿನ್ನುವುದರಿಂದ ಪಿತ್ತಪ್ರಕೋಪವಾಗುತ್ತದೆ. ಅಲ್ಲದೆ ಜ್ವರ ಬರುವ ಸಂಭವವೂ ಇದೆ. ಇದನ್ನು ತಿಂದಮೇಲೆ ಹಾಲು ಕುಡಿಯುವುದರಿಂದ ಅತಿಸಾರ ಉಂಟಾಗುವ ಭಯವಿದೆ. ಹತ್ತಿರದ ಪರಿಸರದಲ್ಲಿ ಸಾಂಕ್ರಾಮಿಕ, ವಾಂತಿಭೇದಿಗಳಿರುವಾಗಲೂ ಇದನ್ನು ತಿನ್ನಬಾರದು. ಇದು ಮೂತ್ರದ ತಡೆಯನ್ನೂ, ಮಲಬದ್ಧತೆಯನ್ನೂ ಪರಿಹರಿಸುತ್ತದೆ.

**55. ಕಲ್ಲುಹೂ**—ಇದು ಲಘುವೂ, ಸ್ನಿಗ್ಧವೂ, ತಿಕ್ತವೂ, ಕಷಾಯವೂ, ವಿಪಾಕದಲ್ಲಿ ಕಟುವೂ, ಮತ್ತು ಪ್ರಭಾವದಿಂದ ಹೃದ್ಯವೂ ಆಗಿರುತ್ತದೆ. ಅಲ್ಲದೆ ಅದು ಪಿತ್ತಶಾಮಕವೂ, ದೀಪಕವೂ, ಗ್ರಾಹಿಯೂ, ಕಫನಿಸ್ಸಾರಕವೂ, ಶೋಥಹರವೂ, ರಕ್ತವಿಕಾರನಾಶಕವೂ, ವ್ರಣರೋಪಣವೂ, ವೇದನಾಸ್ಥಾಪನವೂ, ಕಂಡೂಘ್ನವೂ, ಮೂತ್ರಲವೂ, ಮೂಲವ್ಯಾಧಿನಿವಾರಕವೂ, ದಾಹಪ್ರಶಮನವೂ, ಕಾಮೋತ್ತೇಜಕವೂ, ಜ್ವರ ಮತ್ತು ಕುಷ್ಠನಾಶಕವೂ, ಆಗಿದೆ. ಇದರಿಂದ ಕಫಪಿತ್ತ ಜನ್ಯರೋಗಗಳೂ, ತೃಷ್ಣೆ, ವಮನ ಅಗ್ನಿಮಾಂದ್ಯ, ಪ್ರವಾಹಿಕಾ, ಹೃದಯ ದೌರ್ಬಲ್ಯ, ಶೋಥ, ರಕ್ತವಿಕಾರ, ಕಾಸ, ಶ್ವಾಸ, ಮೊದಲಾದ ರೋಗಗಳೂ ನಿವಾರಣೆಯಾಗುತ್ತವೆ. ಇದನ್ನು ಚೂರ್ಣ, ಲೇಪ, ಕಷಾಯ, ಕಲ್ಪಗಳರೂಪದಲ್ಲಿ

ರೋಗಚಿಕಿತ್ಸೆಯಲ್ಲಿ ಉಪಯೋಗಿಸಲಾಗುತ್ತದೆ. ರೋಗೋಕ್ತವಾದ ಅನುಪಾನ ದಂತೆ ಇದನ್ನು ಅರ್ಧ ತೊಲೆಯಿಂದ ಎರಡುತೊಲೆಯವರೆಗೆ ಚೂರ್ಣರೂಪದಲ್ಲಿಯೂ 3–4 ತೊಲೆಯನ್ನು ಕಷಾಯರೂಪದಲ್ಲಿಯೂ ಕೊಡಬೇಕಾದ ನಿಯಮವಿದೆ.

**56. ಕಡಲೆ**—ಇದು ಲಘುವೂ (ಆದರೆ ಇದರ ಪಿಷ್ಟವು ಗುರುವಾಗಿರುತ್ತದೆ), ರೂಕ್ಷವೂ, ಒಗರೂ, ವಿಪಾಕದಲ್ಲಿ ಮಧುರವೂ, ಆಗಿದ್ದು ಶೀತವೀರ್ಯ ವುಳ್ಳದ್ದಾಗಿರುತ್ತದೆ; ಅಲ್ಲದೆ ಇದು ವಾತಕಾರವೂ, ವಿಷ್ಟಂಭಿಯೂ ಮತ್ತು ರಕ್ತ ಪಿತ್ತ, ಕಫಜ್ವರಾದಿಗಳ ನಾಶಕವೂ, ಆಗಿರುತ್ತದೆ; (ಈ ಗುಣವು ಹುರಿದ ಕಡಲೆಯಲ್ಲಿ ಮಾತ್ರ ಇರುತ್ತದೆ.) ಆದರೆ ನೀರಿನಲ್ಲಿ ನೆನೆಯಿಟ್ಟ ಅಥವಾ ಬೇಯಿಸಿದ ಕಡಲೆಯಲ್ಲಿ ಈ ಗುಣವಿರುವುದಿಲ್ಲ. ಇದು ಬಲಕಾರಕವೂ ಮತ್ತು ರುಚಿಕಾರಕವೂ, ಇರುತ್ತದೆಯಲ್ಲದೆ ಲಘುವೂ, ಒಗರೂ, ಗ್ರಾಹಿಯೂ, ಶೀತವೀರ್ಯವೂ, ವಾತವರ್ಧಕವೂ, ಪಿತ್ತಶಾಮಕವೂ ಮತ್ತು ಶುಕ್ರವನ್ನು ಗಟ್ಟಿಗೊಳಿಸುವಂತಹುದೂ ಆಗಿದೆ. ಕಡಲೆಯನ್ನು ರಾತ್ರಿ ನೆನೆಯಿಟ್ಟು ಬೆಳಿಗ್ಗೆ ಬಹುಮಿತವಾಗಿ ಜೀರ್ಣವಾಗು ವಷ್ಟನ್ನು ಮಾತ್ರ ಚೆನ್ನಾಗಿ ಅಗಿದು ತಿನ್ನುವುದರಿಂದ ವೀರ್ಯವೃದ್ಧಿಯೂ ಮತ್ತು ಬುದ್ಧಿಪ್ರಚುರತೆಯೂ ಕೂಡಾ ಉಂಟಾಗುತ್ತದೆ; ಅತಿಯಾಗಿ ತಿಂದರೆ ಅಜೀರ್ಣ ಭೇದಿಯುಂಟಾಗುತ್ತದೆ; ತಿನ್ನುವಾಗ ಒಂದೆರಡು ಮೆಣಸಿನಕಾಳನ್ನು ಸೇರಿಸಿಕೊಳ್ಳುವು ದೊಳ್ಳೆಯದು. ಚೆನ್ನಾಗಿ ಅಂಗಸಾಧನೆ ಮಾಡುವವರಿಗೆ ಇದು ಒಳ್ಳೆಯ ಶಕ್ತಿದಾಯಕ; ಹಿತಮಿತವಾಗಿ ತಿಂದರೆ ಇದು ಬಡವರ ಟಾನಿಕ್.

**57. ಕರಿಜೀರಿಗೆ**—ಕರಿಜೀರಿಗೆಯು ಲಘುವೂ, ರೂಕ್ಷವೂ, ಕಟುವೂ, ವಿಪಾಕದಲ್ಲೂ ಕಟುವೂ ಉಷ್ಣವೀರ್ಯವುಳ್ಳದ್ದೂ ಆಗಿದ್ದು ಇದು ಕಫವಾತ ಶಾಮಕವೂ, ದೀಪಕವೂ, ರೋಚಕವೂ, ಗ್ರಾಹಿಯೂ, ಅಂತ್ರಸಂಕೋಚಕವೂ, ಉತ್ತಮ ವಾತಾನುಲೋಮವೂ, ದುರ್ಗಂಧನಾಶಕವೂ, ಹೃದ್ಯವೂ ಶೋಥಹರವೂ, ಮೂತ್ರಲವೂ, ರಜಪ್ರವರ್ತಕವೂ ಗರ್ಭಾಶಯ ಶೋಧಕವೂ, ಸ್ತನ್ಯಜನಕವೂ, ನೇತ್ರಹಿತಕರವೂ, ಉದರಕ್ರಿಮಿನಾಶಕವೂ ಮತ್ತು ಜ್ವರಘ್ನವೂ ಆಗಿದೆ. ಇದರಿಂದ ಅರುಚಿ, ವಮನ, ಅಗ್ನಿಮಾಂದ್ಯ, ಅಜೀರ್ಣ, ಉನ್ಮಾದ, ಉದರಶೂಲೆ, ಅತಿಸಾರ, ಸಂಗ್ರಹಿಣಿ, ಹೃದಯದೌರ್ಬಲ್ಯ, ಅಜೀರ್ಣಜ್ವರ, ಪ್ರಸೂತಿವಿಕಾರ ಮತ್ತು ದೂಷಿತವಾದ ತೇಗುಗಳೂ ನಿವಾರಣೆಯಾಗುತ್ತವೆ. ಇದರ ಚೂರ್ಣ, ಕಷಾಯ, ಲೇಪಗಳು ಚಿಕಿತ್ಸೆಯಲ್ಲಿ ರೂಢಿಯಲ್ಲಿವೆ. ಇದರ ಚೂರ್ಣ ಕಾಲು ತೊಲ ಮತ್ತು ಕಷಾಯ 5, 6 ತೊಲವನ್ನು ರೋಗೋಕ್ತ ಅನುಪಾನಗಳಲ್ಲಿ ಕೊಡಬೇಕು.

**58. ಕನಕಸಂಪಿಗೆ**—ಸಂಪಿಗೆಯಲ್ಲಿ ಬಿಳಿಯದು ಮತ್ತು ಹಳದಿ ಹೀಗೆ ಎರಡು ಜಾತಿಗಳುಂಟು; ಇದರ ಹಳದಿಬಣ್ಣದ ಹೂವಿನ ಪರಿಮಳ ಅತಿತೀವ್ರ;

ಇವೇ ಕನಕಸಂಪಿಗೆ. ಆದರೆ ಈ ಹಳದಿ ಮತ್ತು ಕೆಂಪು ಎರಡೂ ಸಂಪಿಗೆಗಳ ಗುಣಧರ್ಮಗಳು ಒಂದೇ ಆಗಿರುತ್ತವೆ. ಕನಕಸಂಪಿಗೆಗೆ ಕೆಂಡಸಂಪಿಗೆ ಎಂಬ ಹೆಸರೂ ಉಂಟು. ಇದು ಕಹಿಯೂ, ಒಗರೂ, ಖಾರೂ, ಹಗುರವೂ (ಲಘು), ಶೋಧಕವೂ, ಮೃದುವಿರೇಚಕವೂ, ಕ್ರಿಮಿನಾಶಕವೂ ಆಗಿದ್ದು ಶೋಭ, ವ್ರಣ, ದಾಹ, ಶ್ವೇತಪ್ರದರ, ರಕ್ತವಿಕಾರ, ಉದರಶೂಲೆ, ಜಲೋದರ, ಕುಷ್ಠ, ಮೂತ್ರಾಶಯವಿಕಾರ ಮತ್ತು ಅರ್ಬುದರೋಗಗಳ ಮೇಲೆ ಸತ್ಪರಿಣಾಮವನ್ನುಂಟು ಮಾಡುತ್ತದೆ. ಇದರ ಹೂವು, ಮರದ ತೊಗಟೆಯ ಭಸ್ಮ ಮತ್ತು ಎಲೆಗಳ ಸ್ವರಸ ಹಾಗೂ ಕಷಾಯಗಳನ್ನು ಔಷಧದ್ರವ್ಯವಾಗಿ ಬಳಸಲಾಗುತ್ತದೆ. ಯೋಗ್ಯ ಅನುಪಾನದಲ್ಲಿ ಕೊಡುವುದು ಚಿಕಿತ್ಸಕನ ಹೊಣೆ.

**59. ಕಮಲ**—ಇದು ಲಘುವೂ, ಸ್ನಿಗ್ಧವೂ ಪಿಚ್ಛಿಲವೂ (ಪ್ರಾಣಧಾರಕ, ಬಲಜನಕ, ಸಂಧಾನಕರ), ಮಧುರವೂ, ತಿಕ್ತವೂ, ಕಷಾಯವೂ, ವಿಪಾಕದಲ್ಲೂ ಮಧುರವೂ ಆಗಿದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ. ಬಿಳಿ, ಕೆಂಪು, ನೀಲಿ ಈ ಮೂರು ಪ್ರಕಾರದ ತಾವರೆಯ ಹೂವು, ಬೀಜ ಮೊದಲಾದುವುಗಳೆಲ್ಲ ಮೇಲಿನ ಗುಣಧರ್ಮಗಳ ಜೊತೆಗೆ ಶಾಮಕ, ಮೇಧ್ಯ, ಸ್ತಂಭಕ, ಹೃದ್ಯ (ಹೃದಯ ಸಂರಕ್ಷಣ), ಶೋಣಿತಸ್ಥಾಪಕ, ಛರ್ದಿನಿಗ್ರಹಣ,ತೃಷ್ಣಾನಿಗ್ರಹಣ, ಭ್ರಾಂತಿ, ಮತ್ತು ದಾಹ ಪ್ರಶಮನ,ಪ್ರಜಾಸ್ಥಾಪನ, ಜ್ವರಘ್ನ, ಮೂತ್ರಲ, ವರ್ಣ್ಯ, ತ್ವಗ್ದೋಷಹರ, ಜಲ್ಯ ಮತ್ತು ಸ್ವಲ್ಪ ಪ್ರಮಾಣದಲ್ಲಿ ವಿಷಘ್ನ ಗುಣವುಳ್ಳದ್ದೂ ಆಗಿದೆ. ಕಫಪಿತ್ತ ಜನ್ಯವಿಕಾರಗಳಲ್ಲೂ, ಮಸ್ತಿಷ್ಕದ ದೌರ್ಬಲ್ಯ, ಮೂರ್ಛೆ, ಮಾನಸಿಕ ಉದ್ವೇಗ ಮತ್ತು ಇದಕ್ಕೆ ಸಂಬಂಧಪಟ್ಟ ಆದ್ರೆಯಲ್ಲೂ, ವಾಕರಿಕೆ, ಬಾಯಾರಿಕೆ, ಅತಿಸಾರ, ಮೂತ್ರಕೃಚ್ಛ್ರ, ರಕ್ತಾತಿಸಾರ, ರಕ್ತಮೂಲವ್ಯಾಧಿ, ರಕ್ತಪ್ರದರ, ರಕ್ತಪಿತ್ತ, ಪ್ರವಾಹಿಕಾ, ವಿಸರ್ಪ, ವಿಸ್ಫೋಟ ಮೊದಲಾದ ಪಿತ್ತದ ಮತ್ತು ರಕ್ತದ ವಿಕಾರಗಳಲ್ಲೂ, ರಕ್ತದ ಕೊರತೆಯಲ್ಲೂ ಇದು ಬಹು ಉಪಯೋಗಿಯಾಗಿದೆ. ಇದು ಗರ್ಭಿಣಿಯರ ಗರ್ಭಸ್ರಾವವನ್ನು ತಪ್ಪಿಸಿ ಗರ್ಭಕ್ಕೆ ಶಕ್ತಿಯನ್ನು ಕೊಡುತ್ತದೆ. ರಕ್ತದ ಒತ್ತಡದ ಮೇಲೆ ಇದು ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆಂಬುದು ಕೆಲವು ತಜ್ಞವೈದ್ಯರ ಅಭಿಪ್ರಾಯವಾಗಿದೆ. ನೆರಳಲ್ಲಿ ಒಣಗಿಸಿ ವಸ್ತ್ರಗಾಳಿತಮಾಡಿದ ಕಮಲದ ಹೂವಿನ ಚೂರ್ಣದಿಂದ ತಯಾರಿಸಿದ ಹಿಮಕಷಾಯವು(ಶೀತಕಷಾಯವು) ಮಂದಾತ್ಮಯುವನ್ನೂ ಮತ್ತು ರಕ್ತದ ಒತ್ತಡವನ್ನೂ ಪರಿಹರಿಸುತ್ತದೆ.

**60. ಕಾಳುಮೆಣಸು**—ಇದು ಉಷ್ಣವೀರ್ಯವುಳ್ಳದ್ದಾಗಿ ವಿಪಾಕದಲ್ಲಿ ಮಧುರರಸವಾಗಿ ಪರಿವರ್ತನೆಗೊಳ್ಳುತ್ತದೆ.ಇದು ದೀಪಕವೂ,ಪಾಚಕವೂ, ವಾತನಾಶಕವೂ ಮತ್ತು ಉತ್ತೇಜಕವೂ ಕೂಡ ಆಗಿರುತ್ತದೆ. ಇದು ಜ್ವರ, ಮೂಲವ್ಯಾಧಿ,

ಮೂತ್ರದೋಷ, ಕೆಮ್ಮು, ದಮ್ಮು, ಅಜೀರ್ಣ ಅಲ್ಲದೆ ಉದರಶೂಲೆಯನ್ನೂ ಪರಿಹರಿಸುತ್ತದೆ; ಇದು ಕ್ರಿಮಿಘ್ನವೂ ಆಗಿರುವುದರಿಂದ ಜಂತು ಬಾಧೆಯನ್ನು ನಿವಾರಿಸುತ್ತದೆ. ಸ್ತ್ರೀಯರ ಋತುಸ್ರಾವವನ್ನು ಸರಿಪಡಿಸುತ್ತದೆ. ಇದನ್ನು ಚೂರ್ಣ ರೂಪವಾಗಿಯೂ,ಕಷಾಯರೂಪವಾಗಿಯೂ ಉಪಯೋಗಿಸುವ ಕ್ರಮವಿದೆ. ಆಯಾ ರೋಗಕ್ಕೆ ತಕ್ಕಂತೆ ವಯೋಮಾನಕ್ಕನುಸರಿಸಿ ಜೇನು, ತುಪ್ಪ, ಲಿಂಬೆಯರಸ ಮೊದಲಾದ ರೋಗೋಕ್ತ ಅನುಪಾನಗಳೊಡನೆ ಹೊತ್ತಿಗೆ 10 ರಿಂದ 30 ಗುಂಜಿಯವರೆಗೆ ಕೊಡಬೇಕು.

**61. ಕಾಚು**—ಇದಕ್ಕೆ ಒಗರು, ಶೀತವೀರ್ಯಗುಣವಿದ್ದು ಸ್ತಂಭಕವಾಗಿರುತ್ತದೆ. ಇದು ಕ್ರಿಮಿಘ್ನವೂ, ರಕ್ತಶೋಧಕವೂ ಆಗಿರುತ್ತದೆ. ಇದರಿಂದ ಅತಿಸಾರ, ಬಹುಮೂತ್ರರೋಗಗಳು ನಿವಾರಣೆಯಾಗುತ್ತವೆ; ಇದು ಹಳೆಯವ್ರಣ ಸುಟ್ಟಗಾಯಗಳನ್ನು ಅತಿ ಜಾಗ್ರತೆಯಾಗಿ ಗುಣಪಡಿಸುತ್ತದೆ. ಅತಿಯಾದ ಮೇದೋವೃದ್ಧಿಯಾಗಿರುವವರು ಪ್ರತಿದಿನ ಕಾಚುಮಿಶ್ರಿತವಾದ ನೀರನ್ನು ಕುಡಿಯುವುದರಿಂದ ಕೃಶತ್ವ ಪಡೆಯುವರು. 10 ರಿಂದ 15 ಗುಂಜಿಯವರೆಗೆ ಇದರ ಚೂರ್ಣವನ್ನು ನೀರು, ಜೇನು, ಮೊಸರುಗಳಲ್ಲಿ ಕೊಡಬೇಕು. ಇದು ಕಾಮೋತ್ತೇಜಕವೂ ಹೌದು. ಆದುದರಿಂದ ಹೆಚ್ಚಿನ ಪ್ರಮಾಣದಲ್ಲಿ ಸೇವಿಸುವುದು ಹಿತಕಾರಿಯಲ್ಲ. ಇದು ಹಲ್ಲಿನ ದೋಷಗಳಲ್ಲಿ ಉಪಯುಕ್ತವಾಗಿದೆ.

**62. ಕಾಮಕಸ್ತೂರಿ**—ಇದರ ಎಲೆಯ ರಸವು ಬಹು ತೀಕ್ಷ್ಣವೂ ಉಷ್ಣವೂ ಆಗಿರುತ್ತದೆ. ಆದರೆ ಬೀಜವು ಮಧುರವೂ, ಶೀತಲವೂ, ಮೂತ್ರಲವೂ, ಸ್ತಂಭಕವೂ ಆಗಿರುತ್ತದೆ. ಇದು ಮಜ್ಜಾತಂತುಗಳನ್ನು ಶಾಮಕಗೊಳಿಸುವುದರಿಂದ ಮತಿಭ್ರಮವನ್ನೂ, ಉನ್ಮಾದವನ್ನೂ ಪರಿಹರಿಸುತ್ತದೆ. ಇದಕ್ಕೆ ಸ್ವೇದಕಗುಣವಿರುವುದರಿಂದ ಶರೀರವನ್ನು ಬೆವರಿಸಿ ಜ್ವರವನ್ನು ನಿವಾರಿಸುತ್ತದೆ. ಇದು ಅಪಚನ ಅಗ್ನಿಮಾಂದ್ಯಗಳನ್ನು ಪರಿಹರಿಸಿ ಆರೋಗ್ಯವನ್ನುಂಟುಮಾಡುತ್ತದೆ. ವಿಷಪರಿಹಾರಕ ಶಕ್ತಿ ಇದಕ್ಕಿರುವುದರಿಂದ ಚೇಳು, ಹಾವುಗಳ ಕಡಿತದಲ್ಲಿ ಇದನ್ನು ಉಪಯೋಗಿಸುವ ಪದ್ಧತಿಯುಂಟು. ಮುಖಕಾಂತಿಗೆ ಇದರ ಎಲೆಯ ರಸವು ಬಹು ಪ್ರಯೋಜನಕಾರಿ ಹೊತ್ತಿಗೆ 4–6 ತೊಲ ರಸವನ್ನು 15–20 ಗುಂಜಿ ಚೂರ್ಣವನ್ನು ರೋಗೋಕ್ತ ಅನುಪಾನದಲ್ಲಿಕೊಡಬೇಕೆಂದಿದೆ—ಹಾಲು, ಸಕ್ಕರೆ. ಜೇನುಗಳು ಅನುಪಾನದಲ್ಲಿ ಮುಖ್ಯವಾದವುಗಳು

**63. ಕಾರೆ** (ಅಂಕೋಲ)–ಇದು ರಸದಲ್ಲಿ ಕಹಿಯೂ, ಉಷ್ಣವೀರ್ಯವುಳ್ಳದ್ದೂ ಆಗಿದ್ದು ಸ್ವಲ್ಪ ಖಾರವೂ, ಘಾಟೂ ಇರತಕ್ಕ ಗುಣವುಳ್ಳದ್ದಾಗಿರುತ್ತದೆ

ಇದು ಕ್ರಿಮಿಘ್ನವೂ, ವಿಷಘ್ನವೂ ಕೂಡ ಆಗಿರುವುದರಿಂದ ಜಂಗಮ ವಿಷದ ಮೇಲೆ ಒಳ್ಳೆಯ ಪರಿಣಾಮಕಾರೀ ಕಾರ್ಯವನ್ನು ಮಾಡುತ್ತದೆ. ಇದರಿಂದ ಶೂಲೆ, ಕಫ, ಪಿತ್ತ, ವಿಸರ್ಪ ವಿಕಾರಗಳು ದೂರವಾಗುತ್ತವೆ. ಕ್ಷಯ, ಬಾಯಾರಿಕೆ ರಕ್ತದೋಷಗಳನ್ನು ನಿವಾರಿಸುವ ಶಕ್ತಿ ಇದಕ್ಕಿದೆ. ಔಷಧ ಪ್ರಯೋಗದಲ್ಲಿ ಇದರ ಕಾಯಿ, ರಸ, ಬೀಜ, ಬೇರುಗಳೆಲ್ಲವೂ ಉಪಯೋಗಕ್ಕೆ ಬರುತ್ತದೆ. ಆದರೆ ಎಳೆಯ ಗಿಡಗಳಿಗಿಂತಲೂ ಚನ್ನಾಗಿ ಬಲಿತ ಮರಗಳನ್ನೇ ಆರಿಸಿಕೊಳ್ಳಬೇಕು. 10 ಗುಂಜಿಯಿಂದ 12 ಗುಂಜಿಯವರೆಗೆ ಚೂರ್ಣವನ್ನೂ, ಎಲೆಯ ರಸವಾದರೆ 1 ರಿಂದ 2 ತೊಲೆಯವರೆಗೂ ರೋಗೋಕ್ತ ಅನುಪಾನದೊಂದಿಗೆ ಕೊಡಬಹುದು. ಸಾಮಾನ್ಯವಾಗಿ ತಂಡುಲೋದಕ ಅಥವಾ ಲಿಂಬೆಯ ರಸವನ್ನು ಉಪಯೋಗಿಸುವ ರೂಢಿಯಿದೆ.

**64. ಕಾಕೋಳಿ**—ಕಾಕೋಳಿಯು ಶೀತಲವೂ, ಮಧುರವೂ, ಗುರುವೂ, ಬೃಂಹಣವೂ (ಧಾತುವರ್ಧಕ)ಆಗಿದ್ದು ವಾತ, ದಾಹ, ರಕ್ತಪಿತ್ತ, ಕ್ಷಯ, ಶೋಫ ಮತ್ತು ಜ್ವರಗಳನ್ನು ನಿವಾರಣೆ ಮಾಡುತ್ತದೆ. ಆದರೆ ಸ್ವಲ್ಪ ಕಫಕಾರಕವಿರುತ್ತದೆ. ಈ ಔಷಧ ದ್ರವ್ಯದ ಅಭಾವದಲ್ಲಿ ಮುಸಲೀ, ಶ್ವೇತ ಮುಸಲಿಯನ್ನು ಉಪಯೋಗಿಸಬೇಕೆಂದಿದೆ. ಚೇಳಿನ ಕಡಿತದ ವಿಷವನ್ನು ಇದು ನಿವಾರಿಸುತ್ತದೆ. ರೋಗೋಕ್ತವಾದ ಉಚಿತ ಅನುಪಾನದಲ್ಲಿ ಇದನ್ನು 15 ರಿಂದ 25 ಗುಂಜಿಯವರೆಗೂ ರೋಗಿಯ ಬಲಾಬಲಗಳನ್ನರಿತು ಕೊಡಬೇಕು.

**65. ಕಾಸರ್ಕನಮರ** (ವಿಷಮುಷ್ಟಿ, ನಂಜಿನಮರ)—ಇದು ರೂಕ್ಷವೂ ಲಘುವೂ, ತೀಕ್ಷ್ಣವೂ, ತಿಕ್ತವೂ, ಕಟುವೂ, ವಿಪಾಕದಲ್ಲಿ ಕೂಡ ಕಟುವೂ ಆಗಿರುತ್ತದೆ, ಆದರೆ ಹಸಿಯ ಕಾಯಿಯು ಶೀತವೀರ್ಯವುಳ್ಳದ್ದಾಗಿರುತ್ತದೆ, ಇದರ ಬೀಜ ತೊಗಟೆ, ಎಲೆ, ತಿರುಳುಗಳೆಲ್ಲವೂ ಔಷಧಕ್ಕೆ ಬರುತ್ತವೆ. ಆದರೆ ಬೀಜವನ್ನು ಶುದ್ಧಿ ಮಾಡಿಯೇ ಉಪಯೋಗಿಸಬೇಕು, ಇದರಿಂದ ವಾತಶಮನವೂ, ದೀಪನವೂ ಪಾಚನವೂ, ಶೂಲಪ್ರಶಮನವೂ, ವಾಜೀಕರಣವೂ, ಕಟುಪೌಷ್ಟಿಕವೂ, ಹೃದಯೋತ್ತೇಜಕವೂ, ಶೋಥಹರವೂ, ಕಾಸಹರವೂ ಉಂಟಾಗುತ್ತದೆ. ಅಲ್ಲದೆ ಬಸ್ತಿ ಶೈಥಿಲ್ಯ, ಕುಷ್ಠ, ಕಂಡೂ, ವಿಷಮಜ್ವರ, ಅರ್ಧಿತವಾತ, ಪಕ್ಷಾಘಾತ, ಅನಿದ್ರಾ, ಅಗ್ನಿಮಾಂದ್ಯ, ಆಮಾಶಯದ ಬೀಗು, ಗ್ರಹಣಿ, ಮೂಲವ್ಯಾಧಿ, ಕ್ರಿಮಿ ಮತ್ತು ಉದರ ಹಾಗೂ ನಾಡಿಶೂಲೆಗಳೂ ನಿವಾರಣೆಯಾಗುತ್ತವೆ. ಇದನ್ನು 2ಗುಂಜಿಯಿಂದ 6 ಗುಂಜಿಯವರೆಗೆ ಸೂಕ್ತ ಅನುಪಾನದಲ್ಲಿ ಕೊಡಬೇಕು; ಆದರೆ ಶುದ್ಧಿಮಾಡದೇ ಉಪಯೋಗಿಸಲೇಬಾರದು.

**66. ಕಾಕಮಾರಿ**—ಇದು ಉಷ್ಣವೀರ್ಯವುಳ್ಳದ್ದಲ್ಲದೇ ತೀವ್ರ ವಿರೇಚಕವೂ, ಕಫನಾಶಕವೂ, ಆಗಿದ್ದು ಜಲೋದರ, ಕ್ರಿಮಿ, ಚರ್ಮರೋಗ ಗೃಧ್ರಸೀ,

ಅಪಸ್ಮಾರ, ಆತುವಾತ ಮೊಲಾದ ರೋಗಗಳನ್ನು ನಿವಾರಿಸುತ್ತದೆ. ಅಲ್ಪ ಪ್ರಮಾಣದಲ್ಲಿ ಇದನ್ನು ತೆಗೆದುಕೊಂಡರೂ ಇದು ದೀಪನವನ್ನೂ, ಪಾಚನವನ್ನೂ ಕಫ ನಿವಾರಣೆಯನ್ನೂ ಮತ್ತು ಬೆವರನ್ನೂ ಉಂಟುಮಾಡುತ್ತದೆ. ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಸೇವಿಸುವುದರಿಂದ ಹೊಟ್ಟೆಯುರಿ, ಬಾಧೆ, ಸಂಕಟಗಳುಂಟಾಗಿ ವಮನವೂ, ಸಂತಾಪವೂ ತೋರಿ ಮೂರ್ಛೆಯನ್ನೂ, ಪ್ರಾಣಾಪತ್ತನ್ನೂ ತರುತ್ತದೆ ಅಫೀಮಿನ ಗುಣಗಳಿಗಿಂತಲೂ ಅಧಿಕವಾದ ಗುಣದಲ್ಲಿರುವುದರಿಂದ ಅಫೀಮಿನ ವಿಷ ಪರಿಹಾರಕ್ಕಾಗಿ ಇದನ್ನು ಕೊಡುವ ರೂಢಿಯಿದೆ; ಇದರ ವಿಷ ಪರಿಹಾರಕ್ಕಾಗಿ ಬಡಾಸೋಪು, ಗೋಧಿಯ ಅಂಬಲಿ, ಗೋಂದು, ಎದೆ ಹಾಲುಗಳನ್ನು ಕೊಡಬೇಕಾಗುತ್ತದೆ. ಇದನ್ನು 1–2 ½ ಗುಂಜಿಯಷ್ಟನ್ನು ಮಾತ್ರ ಎದೆ ಹಾಲಿನಲ್ಲಿ ಅಥವಾ ಜೇನಿನಲ್ಲಿ ಕೊಡಬೇಕು.

**67. ಕಿತ್ತಲೆಹಣ್ಣು**—ಸಿಹಿಯಾದ ಕಿತ್ತಳೆಯರಸವು ಲಘುವೂ, ಸ್ನಿಗ್ಧವೂ, ಮಧುರವೂ, ವಿಪಾಕದಲ್ಲಿ ಶೀತವೀರ್ಯವುಳ್ಳದ್ದೂ, ವಾತಪಿತ್ತಶಾಮಕವೂ. ರೋಚನವೂ, ದೀಪನವೂ, ವಮನ ನಿವಾರಕವೂ, ತೃಷ್ಣಾನಿಗ್ರಹಕವೂ, ಹೃದ್ಯವೂ, ರಕ್ತಕ್ಕೆ ಪೌಷ್ಟಿಕವೂ, ಬಲ್ಯವೂ, ಗ್ರಾಹಿಯೂ, ಸೌಮ್ಯನಸಜನಕವೂ ಆಗಿದ್ದು ಅರುಚಿ. ಹೃದ್ದೌರ್ಬಲ್ಯ, ರಕ್ತದಕೊರತೆ, ರಕ್ತಪಿತ್ತ, ಪಿತ್ತೋದ್ರೇಕ ರಕ್ತೋದ್ವೇಗ, ದಾಹ, ಅಪಚನ, ದಣಿವು, ಮೊದಲಾದವುಗಳನ್ನು ನಷ್ಟಗೊಳಿಸುತ್ತದೆ. ಇದು ಆಹಾರವನ್ನು ಬಹುಬೇಗನೆ ಜೀರ್ಣಗೊಳಿಸುತ್ತದೆ. ಇದರ ಹಣ್ಣಿನರಸವನ್ನು 2 ರಿಂದ 5 ತೊಲೆಯವರೆಗೆ ಕೊಡಬಹುದು.

**68. ಕಿರುನೆಗ್ಗಿಲು**—ಇದರಲ್ಲಿ ಚಿಕ್ಕದು, ದೊಡ್ಡದೆಂಬ ಎರಡು ಜಾತಿಗಳಿವೆ. ಆದರೆ ಔಷಧದಲ್ಲಿ ಕಿರುನೆಗ್ಗಿಲನ್ನೆ (ಚಿಕ್ಕದು) ಉಪಯೋಗಿಸುವುದು ಹೆಚ್ಚು. ದೊಡ್ಡನೆಗ್ಗಿಲನ್ನು ವೀರ್ಯವೃದ್ಧಿಗಾಗಿ ಬಳಸುತ್ತಾರೆ. ನೆಗ್ಗಿಲು ಶೀತವೀರ್ಯವುಳ್ಳದ್ದಾಗಿದ್ದು ಬಲ್ಯವೂ, ಮೂತ್ರಲವೂ ಆಗಿದೆ. ಇದರಿಂದ ಪ್ರಮೇಹ ಮೂತ್ರಪಿಂಡಗಳ ವಿಕಾರ, ಧಾತುನಷ್ಟಗಳು ನಿವಾರಣೆಯಾಗುತ್ತವೆ; ನಪುಂಸಕತೆಯ ಮೇಲೆ ಇದು ಸತ್ಪರಿಣಾಮವನ್ನುಂಟುಮಾಡುತ್ತದೆ. ಹೊತ್ತಿಗೆ 6 ರಿಂದ 20 ಗುಂಜಿಯವರೆಗೆ ಜೇನು, ಕಲ್ಲುಸಕ್ಕರೆ, ತುಪ್ಪಗಳ ಅನುಪಾನದಲ್ಲಿ ಕೊಡಬೇಕು.

**69. ಕುಪ್ಪಿಸೊಪ್ಪು**—ಅಪ್ರಿಯವಾದ ವಾಸನೆಯುಳ್ಳ ಈ ವನಸ್ಪತಿಯಲ್ಲಿ ಕಫಘ್ನ, ಕ್ರಿಮಿಘ್ನ ಚರ್ಮರೋಗನಿವಾರಕ ಗುಣವಿದೆ. ಇದರಲ್ಲಿ ವಮನ ಕಾರಕ ಮತ್ತು ವಿರೇಚಕ ಗುಣವೂ ಇದೆ. ಹಸುಮಕ್ಕಳ ಪಕ್ಕೆಸೆಳೆತ, ಕೆಮ್ಮು, ಕ್ರಿಮಿ ಮತ್ತು ಕ್ಷಯರೋಗಗಳ ಮೇಲೆ ಇದು ಬಹು ಒಳ್ಳೆಯ ಪರಿಣಾಮವನ್ನುಂಟು ಮಾಡುತ್ತದೆ. ಮಕ್ಕಳಿಗ ಕಫ, ಕೆಮ್ಮುಗಳು ಅಧಿಕವಾದಾಗ ಇದರ ರಸವನ್ನು ಒಂದ

ಚಮಚೆ ಕುಡಿಸುವುದರಿಂದ ಕೂಡಲೇ ವಾಂತಿಯಾಗಿ ಕೆಮ್ಮು ಕಫಗಳ ನಿವಾರಣೆಯಾಗುತ್ತದೆ. ಎಲೆಯ ರಸವಾದರೆ 1–2 ಚಮಚೆಯನ್ನೂ, ಒಣಗಿದ ಎಲೆಯ ಚೂರ್ಣವಾದರೆ 5 ರಿಂದ 15 ಗುಂಜಿಯವರೆಗೂ ಕೊಡಬಹುದು; ಕಷಾಯವನ್ನು ಮಾಡಿಯೂ ಉಪಯೋಗಿಸಬಹುದು. ನೂತನ ಉನ್ಮಾದದ ಮೇಲೂ ಇದು ಒಳ್ಳೆಯ ಕೆಲಸ ಮಾಡುತ್ತದೆ.

**70. ಕುಮುದ**—ಇದು ತಾವರೆಯ ಜಾತಿಗೆ ಸೇರಿದ ಹೂವಾಗಿರುತ್ತದೆ. ಇದರಲ್ಲಿ ಬಿಳಿದು, ಕೆಂಪು ಮತ್ತು ನೀಲಿ ಬಣ್ಣಗಳ ಹೂಗಳಿರುತ್ತದೆ. ಇದರ ಗಡ್ಡೆ, ನಾಳ, ಎಲೆ, ಹೂವು, ಎಲ್ಲ ಸೇರಿ ಕುಮುದ ಎಂದು ಹೆಸರಿಸಲಾಗಿದೆ. ಇದು ಶೀತಲವೂ, ಮಧುರವೂ, ವಿಪಾಕವಲ್ಲಿ ಕಹಿಯೂ ಆಗಿರುತ್ತದೆ. ಇದರಿಂದ ಪಿತ್ತವಿಕಾರಗಳೂ, ರಕ್ತದೋಷವೂ, ದಣಿವೂ, ಕಾಸವೂ, ಕಫವೂ, ಬಾಯಾರಿಕೆಯೂ ಮತ್ತು ವಾಂತಿಯೂ ನಿವಾರಣೆಯಾಗುತ್ತದೆ. ಇದರ ಗೆಡ್ಡೆಯು ಮಧುರವೂ, ಮಾಂಸವರ್ಧಕವೂ, ರಕ್ತಪ್ರದರ ಪರಿಹಾರಕವೂ ಮತ್ತು ಗರ್ಭಸ್ಥಾಪಕವೂ ಆಗಿರುತ್ತದೆ. ಇದರ ಗಡ್ಡೆ, ಹೂವು, ಬೀಜ, ಎಲೆಗಳೆಲ್ಲವೂ ಔಷಧದ್ರವ್ಯಗಳಾಗಿದ್ದು ಸಾಮಾನ್ಯವಾಗಿ ಎಲ್ಲವೂ ಒಂದೇ ಧರ್ಮಗಳಿಂದ ಕೂಡಿವೆ, ಆದುದರಿಂದ ಒಂದರ ಅಭಾವದಲ್ಲಿ ಇನ್ನೊಂದನ್ನು ಉಪಯೋಗಿಸಬಹುದು. (ಗಡ್ಡೆಯ ಬದಲು ಹೂ, ಹೂವಿನ ಬದಲು ಕಾಷ್ಠ.) ಇವುಗಳ ಸ್ವರಸ ಅಥವಾ ಒಣಗಿಸಿದ ಭಾಗಗಳ ಚೂರ್ಣವನ್ನು ಔಷಧರೂಪವಾಗಿ ಉಪಯೋಗಿಸಬಹುದು. ಚೂರ್ಣವಾದರೆ ಅರ್ಧ ತೊಲ; ಕಷಾಯ ಅಥವಾ ಸ್ವರಸವಾದರೆ 4–6 ಚಮಚೆಯವರೆಗೆ–ಹಾಲು, ಜೇನು, ತುಪ್ಪಗಳ ಅನುಪಾನದಲ್ಲಿ ಕೊಡಬೇಕು.

**71. ಕುಶ** (ದರ್ಭೆ)—ಇದು ಲಘುವೂ, ಸ್ನಿಗ್ಧವೂ, ಮಧುರವೂ, ಕಷಾಯವೂ ಆಗಿದ್ದು ವಿಪಾಕದಲ್ಲೂ ಮಧುರವೇ ಆಗಿರುತ್ತದೆ. ಅಲ್ಲದೆ ಇದು ತ್ರಿದೋಷಘ್ನವೂ ಸ್ತಂಭಕವೂ, ತೃಷ್ಣಾಹರವೂ, ಮೂತ್ರಲವೂ, ಕುಷ್ಠಘ್ನವೂ ಆಗಿದ್ದು ರಕ್ತಾತಿಸಾರ, ಪ್ರವಾಹಿಕಾ, ವಸ್ತಿವಿಕಾರ, ರಕ್ತಪಿತ್ತ, ರಕ್ತಪ್ರದರ, ಮೂತ್ರಕೃಚ್ಛ್ರ, ಮೂತ್ರತಡೆ, ದಾಹ ಮತ್ತು ವಿಸರ್ಪಗಳನ್ನು ಪರಿಹರಿಸುತ್ತದೆ. ಇದರ ಬೇರಿನ ಕಾಂಟವು ಗರ್ಭವತಿಯರ ಮೂತ್ರಾವರೋಧವನ್ನು ನಿವಾರಿಸುತ್ತದೆ. ಇದರ ಬೇರು ಎಲೆಗಳೆರಡೂ ಔಷಧ ದ್ರವ್ಯಗಳಾಗಿವೆ. ಇದನ್ನು ಕಷಾಯದ ರೂಪದಲ್ಲಿಯೂ ಚೂರ್ಣರೂಪದಲ್ಲಿಯೂ, ಕ್ಷೀರಕಷಾಯದ ರೂಪದಲ್ಲಿಯೂ ಉಪಯೋಗಿಸುವ ಕ್ರಮವಿದೆ. ಚೂರ್ಣವನ್ನು 15 ರಿಂದ 20 ಗುಂಜಿಯಂತೆಯೂ, ಕಷಾಯವನ್ನು 5 ರಿಂದ 10 ತೊಲೆಯವರೆಗೂ ಕೊಡುವ ಕ್ರಮವಿದೆ. ಅನುಪಾನಕ್ಕೆ ಹಾಲು ತುಪ್ಪ, ಜೇನನ್ನು ಹೇಳಿದೆ.

**72. ಕುಸುವೆ**—ಇದರಲ್ಲಿ ಮುಳ್ಳಿರುವುದು ಮತ್ತು ಮುಳ್ಳಿಲ್ಲದಿರುವುದು ಹೀಗೆ ಎರಡು ಜಾತಿಗಳುಂಟು. ಮುಳ್ಳಿರುವ ಕುಸುಮೆಯ ಬೀಜವನ್ನು ವಿಶೇಷ ವಾಗಿ ಎಣ್ಣೆಯನ್ನು ತೆಗೆಯುವುದಕ್ಕಾಗಿಯೇ ಉಪಯೋಗಿಸುತ್ತಾರೆ. ಮುಳ್ಳಿಲ್ಲದ ಕುಸುಮೆಯ ಬೀಜವು ಬಣ್ಣ ಕಟ್ಟುವುದಕ್ಕಾಗಿ ಉಪಯೋಗಿಸಲ್ಪಡುತ್ತದೆ. ಕುಸುಮೆಯ ಬೀಜವು ಲಘುವೂ, ಉಷ್ಣವೂ, ರೂಕ್ಷವೂ, ಕಫನಾಶಕವೂ, ಪಿತ್ತವರ್ಧಕವೂ, ನಿದ್ರಾಕಾರಕವೂ, ಭೇದಕವೂ, ಕೇಶರಂಜಕವೂ, ಸ್ವರ ಶೋಧಕವೂ ಸ್ವೇದಲವೂ, ಆರ್ತವಕಾರಕವೂ, ಉರಃಶೋಧಕವೂ, ಮೂತ್ರ ನಿಸ್ಸಾರಕವೂ ಮತ್ತು ಕಾಸಶ್ವಾಸ, ಜಲೋದರ, ಪಾಂಡು, ರಾಮಲಾ, ಶೋಥ, ಶೂಲೆ, ಮೂತ್ರಕೃಚ್ಛ್ರ, ಕುಷ್ಠ ನಿವಾರಕವೂ ಆಗಿದೆ. ಅಲ್ಲದೆ ಇದರಲ್ಲಿ ಮಸೂರಿಕಾ, ದುಷ್ಟವ್ರಣ, ಉನ್ಮಾದ ಗಳನ್ನು ಗುಣಪಡಿಸುವಂತಹ ಶಕ್ತಿಯೂ ಇದೆ.

**73. ಕುರುಟಿಗ**—ಈ ಬಳ್ಳಿಯುಲ್ಲಿ ಒಂದು ತರದ ಹಾಲಿದೆ; ಎಲೆಯನ್ನು ಮುರಿದಾಗ ಈ ಹಾಲು ಬರುತ್ತದೆ. ಇದು ಕಟುರಸಯುಕ್ತವಾಗಿದ್ದು ಉಷ್ಣವೀರ್ಯ ವುಳ್ಳದ್ದಾಗಿರುತ್ತದೆ. ಇದರ ರಸವನ್ನು ಹಚ್ಚುವುದರಿಂದ ಒಳಗೆ ಸೇರಿದ ಮುಳ್ಳು ಹೊರಕ್ಕೆ ಬರುತ್ತದೆ. ಇದು ವೀರ್ಯವರ್ಧಕವೂ, ರಜವೀರ್ಯಗಳ ಪೋಷಕವೂ ಆಗಿರುವುದರಿಂದ ಇದರ ಸೇವನೆಯಿಂದ ಸ್ತ್ರೀಯರಿಗೆ ಸೂತಕಶೂಲೆಯು ಪರಿ ಹಾರವಾಗಿ ಗರ್ಭವು ನಿಲ್ಲುತ್ತದೆ. ಇದುಕಫಘ್ನವೂ, ವೇದನಾಶಕವೂ, ವಿಷಘ್ನವೂ ಆಗಿರುತ್ತದೆ. ಇದರ ಬೇರನ್ನು ನೀರಿನಲ್ಲಿ ತೇದು ಸರ್ಪವೇ ಮೊದಲಾದ ವಿಷಜಂತು ಗಳು ಕಡಿದಸ್ಥಳಕ್ಕೆ ಲೇಪಿಸಿದರೆ ವಿಷ ಪರಿಹಾರವಾಗುತ್ತದೆ. ಇದರ ಎಲೆಗಳನ್ನು ಅಗಿದು ತಿಂದು ಬಾಯಲ್ಲಿ ಸಕ್ಕರೆಯನ್ನೇ ಇಟ್ಟರೂ ಅದರ ರುಚಿ ತಿಳಿಯುವುದಿಲ್ಲ. ಈ ಬಗೆಯ ಸಕ್ಕರೆಯ ರುಚಿಯನ್ನು ಹೊಡೆಯುವ ಇನ್ನೊಂದು ವನಮೂಲಿಕೆ ಇದೆ; ಅದೇ ಗುಡ್‌ಮಾರ್, ಆದರೆ ಅದೂ ಇದೂ ಒಂದೇ ಅಲ್ಲ.

**74. ಕುಂಬಳ**—ಇದರಲ್ಲಿ ಹಲವು ಜಾತಿಗಳುಂಟು; ಬಿಳಿದು, ಕೆಂಪು, ಹಳದಿಯವುಗಳು ಕೆಲವಿದ್ದರೆ ಇನ್ನೊಂದು ಮೇಲೆ ಬೂದಿ ಸವರಿದಂತೆ ಇರುತ್ತದೆ; ಈ ಬೂದಿಯಂತೆ ಮೇಲೆ ಕಾಣುವುದು ಔಷಧಕ್ಕೆ ಬರುತ್ತದೆ. ಇದೇ ಬೂದಿಗುಂಬಳ ಉಳಿದವುಗಳೆಲ್ಲ ಕೇವಲ ಅಡಿಗೆಗೆ ಉಪಯೋಗಿಸುವಂತಹದು. ಈ ಕೂಷ್ಮಾಂಡವನ್ನು (ಬೂದಿಗುಂಬಳ) ಅಡಿಗೆಗೆ ಮತ್ತು ಔಷಧ ಎರಡಕ್ಕೂ ಉಪಯೋಗಿಸುತ್ತಾರೆ. ಇದರಿಂದ ಅನೇಕ ಸಿಹಿಯ ಖಾದ್ಯ ವಸ್ತುಗಳನ್ನೂ ಮಾಡುತ್ತಾರೆ; ಆದರೆ ತರ ಕಾರಿಯಾಗಿ ಉಪಯೋಗಿಸುವ ಅಡಿಗೆಯ ಕುಂಬಳವು ಬಹುವಾತಕಾರಕವಿದ್ದು ಪಿತ್ತವರ್ಧಕ. ಮಂದಾಗ್ನಿಯನ್ನೂ ಉಂಟುಮಾಡುತ್ತದೆ. ಆದರೆ ಇದು ಮೂತ್ರಕಾರಕವೂ, ತೃಷಾನಿವಾರಕವೂ ಆಗಿರುತ್ತದೆ. ಇದು ವಾತ ಮತ್ತು ಪಿತ್ತ

ಪ್ರಕೃತಿಯವರಿಗೆ ತೀರ ಕೇಡನ್ನು ಮಾಡುತ್ತದೆ. ಆದುದರಿಂದ ಇದನ್ನು ಅಡಿಗೆಯಲ್ಲೂ ಉಪಯೋಗಿಸುವುದರಲ್ಲಿ ಮಿತಿ ಇರುವುದು ಅಗತ್ಯ.

ಚೆನ್ನಾಗಿ ಬಲಿತ ಬೂದುಗುಂಬಳವು ಲಘುವೂ (ಸುಲಭವಾಗಿ ಜೀರ್ಣವಾಗುವಂತಹುದು), ಸ್ನಿಗ್ಧವೂ, ಮಸ್ತಿಷ್ಕಕ್ಕೆ ಶಾಂತಿಯನ್ನುಂಟುಮಾಡುವಂತಹುದೂ, ಬಲದಾಯಕವೂ, ಅನಿದ್ರೆಯನ್ನು ಕಳೆಯುವಂತಹುದೂ, ಹೃದಯಕ್ಕೆ ಬಲವನ್ನು ಕೊಡುವಂತಹುದೂ, ರಕ್ತಪಿತ್ತಶಾಮಕವೂ, ಮೂತ್ರಲವೂ, ಶುಕ್ರಧಾತುವರ್ಧಕವೂ, ನಿರ್ಬಲತೆಯನ್ನೂ ವೃದ್ಧಾಪ್ಯವನ್ನೂ ದೂರಗೊಳಿಸುವಂತಹುದೂ, ಬೃಂಹಣವೂ ಆಗಿರುತ್ತದೆ. ಇದು ಪುಪ್ಪುಸಕ್ಕೆ ಶಕ್ತಿಯನ್ನೂ, ಕ್ಷಯದ ನಿವಾರಣೆಯನ್ನೂ ಮಾಡುತ್ತದೆ; ಆದರೂ ಇದು ಶೀತಪ್ರಕೃತಿಯವರಿಗೆ ಒಳ್ಳೆಯದಲ್ಲ. ಆದುದರಿಂದ ಔಷಧದ ಯೋಜನೆಯಲ್ಲಿ ಇದಕ್ಕೆ ಶೀತನಿವಾರಕ ದ್ರವ್ಯಗಳನ್ನು ಸೇರಿಸಿಕೊಳ್ಳಬೇಕು. ದೇಹಸ್ವಾಸ್ಥ್ಯಕ್ಕೆ ಉಪಯುಕ್ತವಾದ ಅನೇಕ ಲೇಹ್ಯ ಅವಲೇಹ್ಯ, ಘೃತ. ಪಾಕಗಳನ್ನು ಬೂದಿಗುಂಬಳದಿಂದ ಮಾಡುತ್ತಾರೆ; ಆದರೆ ಎಳೆಯ ಕುಂಬಳವು ತೀರ ಹಾನಿಕಾರಕವೆಂಬುದನ್ನು ಮಾತ್ರ ಎಚ್ಚರಿಕೆಯಲ್ಲಿಟ್ಟುಕೊಳ್ಳಬೇಕು.

**75. ಕೆಂಪುಚಂದನ**—ಕೆಂಪುಚಂದನವು ಗುರುವೂ, ರೂಕ್ಷವೂ, ತಿಕ್ತವೂ, ಮಧುರವೂ, ವಿಪಾಕದಲ್ಲಿ ಕಟುವೂ ಮತ್ತು ಶೀತವೀರ್ಯವುಳ್ಳದ್ದೂ ಆಗಿರುತ್ತದೆ; ಅಲ್ಲದೆ ಇದು ಕಫಪಿತ್ತಶಾಮಕವೂ, ಸ್ತಂಭಕವೂ. ರಕ್ತರೋಧಕವೂ, ದಾಹಪ್ರಶಮನವೂ, ಕಣ್ಣಿಗೆ ಹಿತಕರವೂ, ವೀರ್ಯವರ್ಧಕವೂ ಆಗಿರುತ್ತದೆ. ಇದರಿಂದ ವಮನ, ತೃಷಾ, ಅತಿಸಾರ, ರಕ್ತಮೂಲವ್ಯಾಧಿ ರಕ್ತವಿಕಾರ, ಕುಷ್ಠ, ಸಂಗ್ರಹಣಿ, ಬಾಯಾರಿಕೆ, ಜ್ವರ ನೊದಲಾದವುಗಳು ನಿವಾರಣೆಯಾಗುತ್ತವೆ. ಇದರ ಬೇರು ಕಾಂಡ, ಎಲೆ, ಬೀಜಗಳೆಲ್ಲವೂ ಔಷಧಕ್ಕೆ ಬರುತ್ತವೆ. ಮತ್ತು ಇದನ್ನು ಕಾಲುತೊಲೆಯಿಂದ ಅರ್ಧ ತೊಲೆಯವರೆಗೆ ಚೂರ್ಣರೂಪದಲ್ಲಿಯೂ. 1–2 ತೊಲ ಕಷಾಯದ ರೂಪದಲ್ಲಿಯೂ, ಜೇನು, ಸಕ್ಕರೆ ಹಾಲುಗಳ ಅನುಪಾನದಲ್ಲಿ ಕೊಡುವ ನಿಯಮವಿದೆ; ಇದರ ಲೇಪನವೂ ಚಿಕಿತ್ಸೆಯಲ್ಲಿ ಬರುತ್ತದೆ.

**76. ಕೇಸರಿ**—ಇದು ರಸದಲ್ಲಿ ಕಹಿಯೂ, ತಿಕ್ತವೂ, ಲಘುವೂ. ಉಷ್ಣವೀರ್ಯವುಳ್ಳದ್ದೂ ಆಗಿರುತ್ತದೆ, ತ್ರಿದೋಷಹರವೂ, ದೀಪನಕರವೂ, ಗ್ರಾಹಿಯೂ, ಯಕೃತ್ತು ಮತ್ತು ನಾಡಿಗಳ ಉತ್ತೇಜಕವೂ, ಮಸ್ತಿಷ್ಕಕ್ಕೆ ಬಲಕಾರಕವೂ (ಹೆಚ್ಚಿನಪ್ರಮಾಣದಲ್ಲಿ ತೆಗೆದುಕೊಂಡರೆ ಸ್ವಲ್ಪ ಮಾದಕ), ವೇದನಾಶಾಮಕವೂ, ಹೃದ್ಯವೂ, ರಕ್ತಪ್ರಸಾದಕವೂ, ಕಿಂಚಿತ್ ಮೂತ್ರಕಾರಕವೂ, ಆಗಿರುತ್ತದೆ. ಅಲ್ಲದೆ ಇದು ವಾಜೀಕರಣವೂ, ಗರ್ಭಾಶಯ ಸಂಕೋಚಕವೂ,

ಕಣ್ಣಿಗೆ ಹಿತಕರವೂ, ಪ್ರಸನ್ನಕಾರಕವೂ, ಸ್ವೇದಲವೂ ಮತ್ತು ಕಟುಪೌಷ್ಟಿಕವೂ ಕೂಡ ಆಗಿರುತ್ತದೆ. ಇದರಿಂದ ಅಗ್ನಿಮಾಂದ್ಯ, ಅಜೀರ್ಣ, ಶೂಲೆ, ಶೋಥ, ವಮನ, ಶಿರಸ್ಸಿನವ್ಯಾಧಿಗಳೂ, ವಿಷ, ಯಕೃದ್ವಿಕಾರ, ಹೃದಯದೌರ್ಬಲ್ಯ, ರಕ್ತ ವಿಕಾರ, ಧ್ವಜಭಂಗ, ರಜೋರೋಧ, ಕಷ್ಟಾರ್ತವ, ಕಷ್ಟಪ್ರಸವ, ಜ್ವರ, ವ್ರಣ, ಆಕ್ಷೇಪ, ಆಧ್ಮಾನ; ಹಲೀಮಕ, ಪ್ರದರ, ಶ್ವಾಸ, ಆಮವಾತ ಮೊದಲಾದುವುಗಳು ನಿವಾರಣೆಯಾಗುತ್ತವೆ. ಹೀಗೆ ಇದುರೋಗೋಕ್ತ ಅನುಪಾನಗಳಲ್ಲಿ ಹೊಟ್ಟೆಯೊಳಗೆ ಕೊಡಲೂ ಮತ್ತು ಹೊರಗೆ ಲೇಪಿಸಲೂ ಕೂಡ ಅತ್ಯಂತ ಉಪಯುಕ್ತವಾಗಿದೆ.

**77. ಕೊತ್ತುಂಬರಿ**—ಇದು ಶೀತವೀರ್ಯವುಳ್ಳದ್ದಾಗಿ ಪಿತ್ತ ಶಾಮಕವೂ, ಅಗ್ನಿದೀಪಕವೂ, ಪಾಚಕವೂ ಆಗಿರುತ್ತದೆ. ಇದರಿಂದ ಬಾಯಾರಿಕೆ, ಕ್ರಿಮಿದೋಷ, ಮೂತ್ರವಿಕಾರ, ಅರುಚಿ, ವಮನ, ಅಜೀರ್ಣ, ಜ್ವರ, ಅತಿಸಾರ, ಉದರಶೂಲೆ, ಸಂಗ್ರಹಣಿ ಮೊದಲಾದವುಗಳು ಪರಿಹಾರವಾಗಿ ಮಸ್ತಿಷ್ಕಕ್ಕೆ ಶಾಂತಿಯೂ, ಬಲವೂ ಉಂಟಾಗುತ್ತದೆ. ಮೂಲವ್ಯಾಧಿ, ಗಂಡಮಾಲೆ,ಆಸ್ಯಪಾಕಗಳ ಮೇಲೂ ಇದು ಸತ್ಪರಿಣಾಮವನ್ನುಂಟುಮಾಡುತ್ತದೆ ಕೊತ್ತುಂಬರಿಯನ್ನು ಹಸಿಯಾಗಿಯೂ, ಒಣಗಿದ ಬೀಜವನ್ನು ಚೂರ್ಣರೂಪವಾಗಿಯೂ ಔಷಧಗಳಿಗೆ ಉಪಯೋಗಿಸಬಹುದು. ಹೊತ್ತಿಗೆ 1–2 ತೊಲೆಯಂತೆ ಬೇರೆ ಬೇರೆ ರೋಗೋಕ್ತ ವಾದ ಅನುಪಾನದಲ್ಲಿ ಇದನ್ನು ಉಪಯೋಗಿಸಬೇಕು. ಸಕ್ಕರೆ, ಹಾಲು, ಜೇನು ತುಪ್ಪಗಳ ಅನುಪಾನ ಮುಖ್ಯ.

**78. ಕೊಮ್ಮೆ**—(ಕಣಗಿಲೆ) ಇದರಲ್ಲಿ ಬಿಳಿಯದು ಮತ್ತು ಕೆಂಪು ಹೀಗೆ ಎರಡು ಜಾತಿಗಳುಂಟು. ಇದರ ಬೇರು, ಎಲೆ, ಬೀಜಗಳೇ ಮೊದಲಾದ ಪಂಚಾಂಗ ಗಳೂ ಔಷಧದ್ರವ್ಯಗಳಾದರೂ ಬೇರಿನ ಉಪಯೋಗವೇ ಹೆಚ್ಚು. ಇದು ವಾತಘ್ನ, ಶೋಥಘ್ನ ಇದ್ದು ವಿಷಘ್ನವೂ ಆಗಿದೆ. ಬಿಳಿಯ ಮತ್ತು ಕೆಂಪು ಕಣಗಿಲೆಯಲ್ಲಿ ಸ್ವಲ್ಪಮಟ್ಟಿಗೆ ಗುಣಧರ್ಮದಲ್ಲಿ ಭೇದವಿದ್ದರೂ ಒಂದರಅಭಾವದಲ್ಲಿ ಇನ್ನೊಂದನ್ನು ಉಪಯೋಗಿಸಬಹುದೆಂಬುದರಿಂದ ಎರಡರ ರಸಾಯನಿಕ ಸಂಘಟನಾಶಕ್ತಿಯೂ ಒಂದೇ ಒಂದೇ ಪರಿಗಣಿಸಬಹುದು. ಇದರಿಂದ ಪಾಂಡು, ಕಾಮಾಲೆ, ಶೋಥ, ಹಲೀಮಕ, ಅರುಚಿ, ರಕ್ತಪಿತ್ತ, ಕಾಸ, ಶ್ವಾಸ, ಭಗಂದರ, ಪ್ಲೀಹ, ಉದರ ರೋಗ, ಅಜೀರ್ಣಜ್ವರ ಮೊದಲಾದ ಎಲ್ಲಾ ರೋಗಗಳೂ ನಿವಾರಣೆಯಾಗುತ್ತವೆ. ಇದರಿಂದ ಸಿದ್ಧಗೊಳಿಸಿದ ತೈಲದ ಸೇವನೆಯಿಂದ ವಾತರಕ್ತ, ಗೃಧ್ರಸಿ ಮೊದಲಾದ ಪ್ರಬಲವಾದ ವಾತರೋಗಗಳೆಲ್ಲ ನಿವಾರಣೆಯಾಗುತ್ತವೆ.

**79. ಕೊಡಸಿಗೆ**—ಚರಕಾಚಾರ್ಯರು ಸ್ತ್ರೀಕುಟಜವೆಂದೂ, ಪುರುಷ ಕುಟಜವೆಂದೂ ಎರಡು ಬಗೆಯಾಗಿ ಹೇಳಿದ್ದಾರೆ. ಆದರೆ ಎರಡರ ಗುಣಧರ್ಮಗಳೂ

ಒಂದೇ, ಆದರೆ ಸ್ತ್ರೀಕುಟಜವು ರಸದಲ್ಲಿ ಮಧುರವೂ, ಪುರುಷಕುಟಜವು ಕಹಿಯೂ ಇರುತ್ತವೆ, ಇವುಗಳ ತೊಗಟೆಯು ಲಘುವೂ, ರೂಕ್ಷವೂ ತಿಕ್ತವೂ ಕಷಾಯವೂ (ಗ್ರಾಹಿ), ವಿಪಾಕದಲ್ಲಿ ಕಹಿಯೂ ಮತ್ತು ಶೀತವೀರ್ಯವೂ ಆಗಿರುತ್ತದೆ, ಇದು ಕಫಪಿತ್ತಶಾಮಕ, ವಾಮಕ; ದೀಪಕ, ಸ್ತಂಭಕ, ರಕ್ತಶೋಧಕ ಧಾತುಶೋಷಣ, ವ್ರಣರೋಪಣವಾಗಿದ್ದು ಅತಿಸಾರ, ರಕ್ತಪಿತ್ತ, ಮೂಲವ್ಯಾಧಿ, ಜ್ವರ, ಕುಷ್ಠ, ಕ್ರಿಮಿ, ಅಗ್ನಿಮಾಂದ್ಯ ಜ್ವರಾತಿಸಾರ, ಪ್ರವಾಹಿಕ, ಉದರಶೂಲೆ ಮೊದಲಾದವುಗಳನ್ನು ಪರಿಹರಿಸುತ್ತದೆ. ಇದರ ಬೀಜದಲ್ಲೊಂದು ಬಗೆಯ ತೈಲ ಇದೆ. ಕುಟಜವನ್ನು ಚೂರ್ಣ, ಸ್ವರಸ, ಕಷಾಯ, ಘಾಂಟಗಳ ರೂಪದಲ್ಲಿ ಉಪಯೋಗಿಸಲಾಗುತ್ತದೆ. ಈ ಕುಡಿಜದ ಬೀಜವೆ–ಇಂದ್ರಜವ.

**80. ಕೋಳಿಕುಟುಮನಗಡ್ಡೆ**—ಇದು ಲಘುವೂ, ತೀಕ್ಷ್ಣವೂ, ಕಟುವೂ, ತಿಕ್ತವೂ, ಆಗಿದ್ದು ವಿಪಾಕದಲ್ಲಿ ಕಹಿಯಾಗಿರುತ್ತದೆ. ಉಷ್ಣವೀರ್ಯವುಳ್ಳ ಇದು ಗರ್ಭಪಾತಕವೂ ಗರ್ಭಾಶಯ ಸಂಕೋಚಕಾರಕವೂ ಆಗಿರುತ್ತದೆ; ಇದರ ಲೇಪನದಿಂದ ಶೋಥೆ, ವಾತಶೂಲೆ, ವ್ರಣ, ಕುಷ್ಠ, ಮೂಲವ್ಯಾಧಿಗಳು ನಿವಾರಣೆಯಾಗುತ್ತವೆ. ಅಲ್ಪ ಪ್ರಮಾಣದಲ್ಲಿ ಸೇವಿಸುವುದರಿಂದ ದೀಪಕವೂ, ಕಫವಾತಶಾಮಕವೂ, ಕ್ರಿಮಿನಾಶಕವೂ, ರಕ್ತಶೋಧಕವೂ, ಜ್ವರಘ್ನವೂ ಆದ ಲಾಂಗಲಿಯು (ಕೋಳಿಕುಟುಮ) ಬಲ್ಯವೂ, ರಸಾಯನವೂ ಕೂಡ ಆಗಿದೆ.

**81. ಕಂಕುಷ್ಠ**—ಇದು ವಮನ, ವಿರೇಚನ ಮತ್ತು ಮೂತ್ರನಾಳದ ದೋಷಗಳನ್ನು ಗುಣಪಡಿಸುತ್ತದೆ. ಇದರಲ್ಲಿ ಪಕ್ಷಾಘಾತ, ಅರ್ಧಾಂಗವಾಯು ಅಪಸ್ಮಾರ, ಅಕ್ಷೇಪಕವೇ ಮೊದಲಾದ ರೋಗಗಳನ್ನು ನಿವಾರಿಸುವ ಶಕ್ತಿ ಇರುತ್ತದೆ. ಅಲ್ಲದೆ ಇದರಿಂದ ಜಲೋದರವೂ ಮತ್ತು ಇತರ ಕಫ ಪ್ರಧಾನವಾದ ರೋಗಗಳೂ ಗುಣಹೊಂದುತ್ತವೆ. ಇದರ ಪ್ರಯೋಗಗಳನ್ನು ವಾತಾನುಲೋಮಿಕ ಔಷಧ ದ್ರವ್ಯಗಳ ಜೊತೆಯಲ್ಲಿ ಸೇರಿಸಿ ಮಾಡುವುದು ಹೆಚ್ಚು ಪ್ರಯೋಜನಕಾರಿಯಾಗಿದೆ; ಅಂದರೆ ಏಲಕ್ಕಿ, ಲಾವಂಚ, ತವಕ್ಷೀರ, ವಂಶಲೋಚನ, ಮೊದಲಾದುವುಗಳು ಕಂಕುಷ್ಠದ ಜೊತೆ ಸೇರಿ ಒಳ್ಳೆಯ ಕೆಲಸವನ್ನು ಮಾಡುತ್ತವೆ. ಆದರೆ ಗರ್ಭವತಿಯರಿಗೆ ಮತ್ತು ರಜಸ್ವಲೆಯಾದವರಿಗೆ ಇದನ್ನು ಕೊಡಲೇ ಕೂಡದೆಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ದುಷ್ಟವ್ರಣಗಳ ಮೇಲೆ ಇದು ಬಹು ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ; ಇದನ್ನು 2 ಗುಂಜಿಯಿಂದ 5 ಗುಂಜಿಯವರೆಗೆ ಕೊಡುವ ನಿಯಮವಿದೆ.

**82. ಕಂಪಿಲ್ಲ**—ಇದು ಲಘುವೂ, ತೀಕ್ಷ್ಣವೂ, ರೂಕ್ಷವೂ, ರಸ ಮತ್ತು

ವಿಪಾಕಗಳಲ್ಲಿ ಕಟುವೂ, ಉಷ್ಣವೀರ್ಯವೂ, ವಾತಕಫನಾಶಕವೂ, ಅಗ್ನಿದೀಪಕವೂ, ಪಿತ್ತಕಾರವಾದರೂ ಪಿತ್ತಶಮನಾರ್ಥ ಉಪಯೋಗಿಯೂ, ಅನುಲೋಮನ ಮತ್ತು ತೀವ್ರರೇಚನದಿಂದ ಆದ್ಮಾನ, ಉದರರೋಗ ಮತ್ತು ವಾತಗುಲ್ಮಗಳ ಪರಿಹಾರಕವೂ, ಕ್ರಿಮಿಘ್ನವೂ, ರಕ್ತಶೋಧಕವೂ, ಅಶ್ಮರೀಭೇದಕವೂ, ಕಂಡೂ, ಪಾಮಾ, ಕುಷ್ಠಾದಿ ಚರ್ಮರೋಗನಾಶಕವೂ, ವ್ರಣರೋಪಣವೂ, ಶೂಲೆ, ಶೋಭೆ, ರಕ್ತ ಪಿತ್ತ ಮತ್ತು ಪ್ರಮೇಹನಾಶಕವೂ ಹಾಗೂ ಕಾಮೋತ್ತೇಜಕವೂ ಆಗಿರುತ್ತದೆ. ಶರೀರದ ಎಲ್ಲ ನರನಾಡಿಗಳ ಮತ್ತು ಸ್ನಾಯುಗಳ ಮೇಲೂ, ಅನ್ನಪಾಚಕ ಅಂಗಗಳ ಮೇಲೂ ಇದು ಪ್ರಕ್ಷೋಭೆಯನ್ನುಂಟುಮಾಡುತ್ತದೆ. ಇದರ ಸೊಪ್ಪು ಶೀತವೀರ್ಯದಿಂದ ಕೂಡಿದ್ದು ದೀಪಕವಾಗಿದೆ. ಇದರ ಎಲೆಗಳನ್ನು ಅಡಿಗೆಯಲ್ಲಿ ಉಪಯೋಗಿಸುತ್ತಾರೆ; ಎಲೆಗಳನ್ನು ಎಣ್ಣೆಯಲ್ಲಿ ಕಲಸಿ ಹಚ್ಚುವುದರಿಂದ ವಾತರೋಗ ನಿವಾರಣೆಯಾಗುತ್ತದೆ. ಇದರ ಪ್ರಮಾಣ 6ರಿಂದ 36ಗುಂಜಿಯವರೆಗೆ ದೊಡ್ಡವರಿಗೆ, ಚಿಕ್ಕವರಿಗೆ 10 ಗುಂಜಿಯವರೆಗೆ ಹಾಲು, ಮೊಸರು, ಮಜ್ಜಿಗೆ, ಜೇನು ಅಥವಾ ಬೆಲ್ಲದ ಅನುಪಾನದಲ್ಲಿ ಕೊಡಬೇಕು.

**83. ಖರ್ಜೂರ**—ಇದು ಸ್ನಿಗ್ಧವೂ, ಮಧುರವೂ, ಗುರುವೂ, ಶೀತವೀರ್ಯವುಳ್ಳದ್ದೂ ಆಗಿದ್ದು ವಿಪಾಕದಲ್ಲೂ ಮಧುರವೇ ಆಗಿರುತ್ತದೆ. ಇದು ಮಸ್ತಿಷ್ಕಕ್ಕೆ ಶಾಂತಿಯನ್ನೂ, ಹೃದಯಕ್ಕೆ ಬಲವನ್ನೂ, ನಾಡಿಗೆ ಶಕ್ತಿಯನ್ನೂ ನೀಡಿ ವಾತಪಿತ್ತಶಾಮಕವನ್ನೂ ಸ್ನೇಹನವನ್ನು ಮತ್ತು ಸ್ತಂಭನವನ್ನೂ ಕೂಡ ಉಂಟುಮಾಡುತ್ತದೆ. ಇದರಿಂದ ಕಫದ ನಿವಾರಣೆಯಾಗುತ್ತದೆಯಲ್ಲದೆ ಬೃಂಹಣವೂ ಉಂಟಾಗುತ್ತದೆ. ಜ್ವರ, ದಾಹ, ಶ್ರಮ, ಭ್ರಮೆ, ಮದಾತ್ಯಯ, ಮಸ್ತಿಷ್ಕ ವಿಕಾರ, ಬಾಯಾರಿಕೆ, ವಾಕರಿಕೆ, ಅತಿಸಾರ, ಮೂತ್ರಕೃಚ್ಛ್ರ, ಕಟಿಶೂಲೆ, ಗೃಧ್ರಸಿಗಳೇ ಮೊದಲಾದ ವಾತವಿಕಾರಗಳೂ ಪರಿಹಾರವಾಗುತ್ತವೆ. ಆದರೆ ಇದು ಸುಲಭವಾಗಿ ಜೀರ್ಣವಾಗುವುದಿಲ್ಲ. ಮಧುಮೇಹವೇ ಮೊದಲಾದ ಕೆಲವು ರೋಗಗಳಲ್ಲಿ ಸಕ್ಕರೆ, ಬೆಲ್ಲ ಮೊದಲಾದ ಸಿಹಿ ಪದಾರ್ಥಗಳು ವಿರುದ್ಧವಾದರೂ ಖರ್ಜೂರವು ಮಾತ್ರ ವಿರುದ್ಧವಲ್ಲ. ಹಾಲು ಸಕ್ಕರೆ, ತುಪ್ಪಗಳ ಅನುಪಾನದಲ್ಲಿ ಪಚನಶಕ್ತಿಯನ್ನು ನೋಡಿ ಕೊಡಬೇಕು. ಇದರಲ್ಲಿ ನಾಲ್ಕು ಬೇರೆ ಬೇರೆ ಜಾತಿಗಳುಂಟು. ಗುಣಧರ್ಮದಲ್ಲಿ ಎಲ್ಲವೂ ಒಂದೇ.

**84. ಗರಿಕೆ**—ಇದರಲ್ಲಿ ಶ್ವೇತ,ನೀಲ,ಪುರುಷ ಮತ್ತು ಸ್ತ್ರೀದೂರ್ವಾಗಳೆಂದು ಬೇರೆ ಬೇರೆ ಭೇದಗಳುಂಟು. ಆದರೆ ಈ ಎಲ್ಲದರ ಗುಣಧರ್ಮಗಳೂ ಒಂದೇ ಆಗಿರುತ್ತವೆ. ಗರಿಕೆಯು ಶಾಮಕವೂ, ವ್ರಣನಾಶಕವೂ, ವೇದನಾಹರವೂ, ಪಿತ್ತನಿವಾರಕವೂ ಮತ್ತು ಮೂತ್ರಲವೂ ಆಗಿರುತ್ತದೆ. ಇದರಿಂದ ಪ್ರದರ, ನೇತ್ರ ರೋಗ, ಜ್ವರ, ಮೇಹ, ಮೂಲವ್ಯಾಧಿ, ಚರ್ಮವ್ಯಾಧಿ ಮತ್ತು ದುಷ್ಟವ್ರಣಗಳೂ

ಕೂಡ ಪರಿಹಾರವಾಗುತ್ತವೆ. ಇದರ ಬೇರು, ಹುಲ್ಲು ಕೂಡ ಔಷಧದ್ರವ್ಯಗಳಾಗಿರುತ್ತವೆ; ಸ್ವರಸ, ಕಷಾಯ ಮತ್ತು ಲೇಪಗಳ ರೂಪದಲ್ಲಿ ಇದರ ಉಪಯೋಗವಾಗುತ್ತದೆ. ಹೊತ್ತಿಗೆ 2, 3 ತೊಲ ಸ್ವರಸ, 5, 6 ತೊಲ ಕಷಾಯಗಳನ್ನು ರೋಗೋಕ್ತ ಅನುಪಾನಗಳೊಡನೆ ವಿಧಿಸಬೇಕು.

**85. ಗರುಗ**—ಇದು ಉಷ್ಣವೀರ್ಯವುಳ್ಳದ್ದಾಗಿ ದೀಪನವೂ, ಪಾಚನವೂ, ವಾತನಾಶಕವೂ ಆಗಿರುತ್ತದೆ. ಇದರಿಂದ ಚರ್ಮದೋಷವೂ, ಮೂತ್ರದೋಷವೂ ನಿವಾರಣೆಯಾಗಿ ವ್ರಣವು ಬೇಗ ಮಾಯುತ್ತದೆ. ಯಕೃತ್ತು, ಆಮಾಶಯ, ಪಕ್ವಾಶಯಗಳ ವಿಕಾರಗಳು ನಿವಾರಣೆಯಾಗಿ ಪಚನಕ್ರಿಯೆಯು ಹೆಚ್ಚುವುದರಿಂದ ಶರೀರಕ್ಕೆ ಚೈತನ್ಯವುಂಟಾಗುತ್ತದೆ. ಇದು ರಸಾಯನವೂ ಆಗಿದೆ. ಮೂಲವ್ಯಾಧಿ, ಉದರಬಾಧೆ ಅಗ್ನಿಮಾಂದ್ಯ, ದೃಷ್ಟಿದೋಷ, ಪಿತ್ತವಿಕಾರ, ಜ್ವರ, ಕೆಮ್ಮು ಇದರಿಂದ ನಿವಾರಣೆಯಾಗುವುದಲ್ಲದೆ ಇಂದ್ರಲುಪ್ತವೂ ಪರಿಹಾರವಾಗುತ್ತದೆ. ತಲೆಯ ಕೂದಲು ಕಪ್ಪಾಗಿಯೂ, ಉದ್ದವಾಗಿಯೂ ಬೆಳೆಯುತ್ತದೆ. ಇದನ್ನು ಸ್ವರಸ, ಚೂರ್ಣ ಕಷಾಯಗಳರೂಪದಲ್ಲಿ ಉಪಯೋಗಿಸತಕ್ಕದ್ದಿದೆ. ಹೊತ್ತಿಗೆ ಅರ್ಧದಿಂದ ಒಂದು ತೊಲೆಯವರೆಗೆ, ಜೇನು, ಸಕ್ಕರೆ ಮೊದಲಾದ ರೋಗೋಕ್ತ ಅನುಪಾನಗಳೊಂದಿಗೆ ಸೇವನೆ.

**86. ಗಜ್ಜುಗ**—ಇದು ರಸದಲ್ಲಿ ಕಹಿಯೂ, ವೀರ್ಯದಲ್ಲಿ ಉಷ್ಣವೂ ಆಗಿದ್ದು ವಿಪಾಕದಲ್ಲಿ ಕಟುವಾಗಿರುತ್ತದೆ. ಅಲ್ಲದೆ ಇದು ದೀಪಕವೂ, ಯಕೃತ್ತಿನ ಉತ್ತೇಜಕವೂ, ರಕ್ತಶೋಧಕವೂ, ವೇದನಿವಾರಕವೂ, ಬಲ್ಯವೂ, ಆಗಿದ್ದು ಶೋಭೆ, ಕಫ, ವಾತ, ಕುಷ್ಠ, ಕ್ರಿಮಿ, ಜ್ವರ, ಪ್ರಮೇಹ, ಮೂಲವ್ಯಾಧಿ, ಶ್ವಾಸಕಾಸಗಳ ಪರಿಹಾರಮಾಡುವುದಲ್ಲದೆ ಗರ್ಭಾಶಯಕ್ಕೆ ಚೈತನ್ಯವನ್ನೂ ಉಂಟುಮಾಡುತ್ತದೆ; ಇದು ಮೂತ್ರಲವೂ ಆಗಿದೆ; ಇದರ ಬೇರು, ಕಾಯಿ, ಎಲೆ, ಹೂವು ಪ್ರತಿಯೊಂದೂ ಔಷಧಿದ್ರವ್ಯಗಳೇ ಆಗಿದ್ದು ಇವು ವಿಶಿಷ್ಟ ರೀತಿಯಲ್ಲಿ ರೋಗನಿವಾರಣೆಯನ್ನು ಮಾಡುತ್ತದೆ. ಎಲೆಗಳ ಸ್ವರಸ, ಬೇರು, ಕಾಯಿ, ಹೂವುಗಳನ್ನು ಚೂರ್ಣ ಮತ್ತು ಕಷಾಯಗಳ ರೂಪದಲ್ಲಿ ಗಜ್ಜುಗವನ್ನು ಚಿಕಿತ್ಸೆಯಲ್ಲಿ ಉಪಯೋಗಿಸಿಕೊಳ್ಳಲಾಗುತ್ತಿದೆ. ಹೊತ್ತಿಗೆ 5 ರಿಂದ 15 ಗುಂಜಿಯವರೆಗೆ ರೋಗಕ್ಕೆ ತಕ್ಕ ಅನುಪಾನವನ್ನು ಅಳವಡಿಸಿಕೊಳ್ಳಬೇಕು.

**87. ಗಸಗಸೆ**—ಇದು ಶೀತವೀರ್ಯವುಳ್ಳದ್ದಾಗಿ ಲಘುವೂ, ಗ್ರಾಹಿಯೂ ಕಹಿಯೂ ಆಗಿದ್ದು ಮದಕಾರಕವೂ, ಮೋಹವನ್ನೂ ಮತ್ತು ನಿದ್ರೆಯನ್ನುಂಟು ಮಾಡತಕ್ಕದ್ದೂ ಆಗಿದೆ; ಇದರಿಂದ ಕಫ ಮತ್ತು ಕಾಸಗಳ ನಿವಾರಣೆಯಾಗುತ್ತದೆ. ವೇದನೆಯು ಪರಿಹಾರವಾಗುತ್ತದೆ; ಆದರೆ ದೀರ್ಘಕಾಲದ ಇದರ ಸೇವನೆಯಿಂದ

ನಪುಂಸಕತ್ವವು ಉಂಟಾಗುತ್ತದೆ. ಇದರ ಬಾಹ್ಯಲೇಪನದಿಂದ ನೋವು ಪರಿಹಾರವಾಗುತ್ತದೆ; ಕ್ವಾಥ ಮತ್ತು ಫಾಂಟದಿಂದ ಸೊಂಟನೋವು, ತಲೆನೋವು, ಪಾರ್ಶ್ವಶೂಲೆ, ರಕ್ತವಿಕಾರಗಳು ನಿವಾರಣೆಯಾಗುತ್ತವೆ; ಅನಿದ್ರೆಯು ಪರಿಹಾರ ವಾಗುತ್ತದೆ. ಸಾಮಾನ್ಯವಾಗಿ ಸಕ್ಕರೆ, ತುಪ್ಪ ಮತ್ತು ಹಾಲುಗಳ ಅನುಪಾನದಲ್ಲಿ ಎರಡು ಎರಡೂವರೆ ತೊಲೆಯ ಪ್ರಮಾಣದಲ್ಲಿ ಕೊಡುವ ಪದ್ಧತಿಯಿದೆ.

**88. ಗಜಹಿಪ್ಪಲಿ**—ಇದು ಕಟು, ದೀಪನ, ಉಷ್ಣವೀರ್ಯವಿದ್ದು ವಾತ ಕಫಶಾಮಕವೂ ಆಗಿದೆ. ಅಲ್ಲದೆ ತೀಕ್ಷ್ಣವೂ, ಸ್ವೇದಲವೂ, ಸುಗಂಧಕಾರಕವೂ, ವಾತಹರವೂ, ಉತ್ತೇಜಕವೂ, ಪಾಚಕವೂ, ಬಲ್ಯವೂ ಆದ ಗಜಹಿಪ್ಪಲಿಯು ಅತಿಸಾರ, ಶ್ವಾಸ, ಕ್ರಿಮಿದೋಷಗಳನ್ನು ಮತ್ತು ಕಂಠಕ್ಕೆ ಸಂಬಂಧಪಟ್ಟ ವ್ಯಾಧಿಗಳನ್ನು ನಿವಾರಿಸುತ್ತದೆ. ಇದರ ಚೂರ್ಣವನ್ನು 5 ಗುಂಜಿಯಿಂದ 15 ಗುಂಜಿಯವರೆಗೆ ಬಿಸಿನೀರಿನಲ್ಲಿ ಕೊಡುವ ನಿಯಮವಿದೆ.

**89. ಗಜ್ಜರಿ**— (ಕೆಂಪುಮೂಲಂಗಿ) ಇದು ಲಘುವೂ, ಕಾರವೂ, ಘಾಟೂವುಳ್ಳದ್ದಾಗಿ ವಿಪಾಕದಲ್ಲಿ ಮಧುರವೂ, ಶೀತವೀರ್ಯವುಳ್ಳದ್ದೂ ಆಗಿರುತ್ತದೆ. ಗಜ್ಜರಿಯು ವಾತ, ಪಿತ್ತ, ಕಫಗಳ ಶಾಮಕವಾಗಿದ್ದು ತ್ರಿದೋಷವನ್ನೂ ಪರಿಹರಿಸುತ್ತದೆ.. ಇದು ಹೃದ್ಯವೂ, ಬಲ್ಯವೂ, ವೀರ್ಯವರ್ಧಕವೂ ಆಗಿದ್ದು ಹಳೆಯ ಕೆಮ್ಮುಗಳ ಮೇಲೂ ಮತ್ತು ಉಷ್ಣದ ಕೆಮ್ಮುಗಳ ಮೇಲೂ ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತದೆ. ಇದರಲ್ಲಿ ನೇತ್ರಪಟುತ್ವವನ್ನುಂಟುಮಾಡತಕ್ಕ ಶಕ್ತಿ ಇದೆ; ಅಶ್ಮರಿ (ಮೂತ್ರದ ತಡೆ)ಯನ್ನು ನಿವಾರಿಸುತ್ತದೆ. ಇದರ ಬೀಜವು ಸ್ತ್ರೀಯರ ಮಾಸಿಕ ಧರ್ಮದಲ್ಲಿ ಉಂಟಾದ ತಡೆಯನ್ನು ನಿವಾರಿಸುತ್ತದೆ; ಕ್ರಿಮಿರೋಗ ನಿವಾರಣೆಯಾಗುತ್ತದೆ. ಪ್ರಸವಕಾಲದಲ್ಲಿ ಸುಲಭದ ಹೆರಿಗೆಗೆ ಅವಕಾಶವನ್ನುಂಟುಮಾಡಿಕೊಡುತ್ತದೆ. ಇದು ಹೆಚ್ಚಿನ ಗುಣಧರ್ಮಗಳಲ್ಲಿ ಬಿಳಿಯ ಮೂಲಂಗಿಯನ್ನೇ ಹೋಲುತ್ತಿದ್ದರೂ ವೈದ್ಯಕೀಯ ದೃಷ್ಟಿಯಿಂದ ಅದಕ್ಕಿಂತಲೂ ಗುಣಮಟ್ಟದಲ್ಲಿ ಬಹು ಹೆಚ್ಚಿನದ್ದಾಗಿರುತ್ತದೆ.

**90. ಗಾಂಧಾರಿ**—ಇದರಲ್ಲಿ ಎರಡು ಜಾತಿಗಳಿವೆ; ಆದರೆ ಗುಣಧರ್ಮಗಳಲ್ಲೂ, ರಾಸಾಯನಿಕ ಸಂಘಟನೆಯಲ್ಲೂ ಹೆಚ್ಚಿನದೇನೂ ಭೇದವಿಲ್ಲ. ಇದು ರೂಕ್ಷವು, ಲಘುವೂ, ಕಟುವೂ, ತಿಕ್ತವೂ ವಿಪಾಕದಲ್ಲೂ ಕಟುವೇ ಆಗಿದ್ದು ಉಷ್ಣವೀರ್ಯ ವುಳ್ಳದ್ದಾಗಿರುತ್ತದೆ. ಇದು ರುಚಿವರ್ಧಕ, ದೀಪಕ, ಕಫವಾತಶಾಮಕ, ಶೋಥಹರ, ವೇದನಾಹರ, ರಕ್ತಶೋಧಕ, ಹೃದಯೋತ್ತೇಜಕ, ಜ್ವರಘ್ನವಾಗಿದ್ದು, ಅಗ್ನಿಮಾಂದ್ಯ, ಶ್ಲೀಪದ, ಆಮವಾತ, ಪ್ಲೀಹವೃದ್ಧಿ, ಅರ್ಶ (ಮೂಲವ್ಯಾಧಿ.) ಶೋಥ ಮೊದಲಾದುವುಗಳ ನಿವಾರಣೆಯಲ್ಲಿ ಸತ್ಪರಿಣಾಮವನ್ನುಂಟುಮಾಡುತ್ತದೆ. ಇದರ ಎಲೆ, ಬೇರು, ತ್ವಕ್ಕುಗಳು ಔಷಧಪ್ರವ್ಯಗಳಾಗಿವೆ. ಇವುಗಳನ್ನು ಚೂರ್ಣ,

ಕಷಾಯ ಲೇಪನಗಳ ರೂಪದಲ್ಲಿ ಉಪಯೋಗಿಸುವ ಕ್ರಮವಿದೆ. ಬೇರಿನ ಮತ್ತು ತೊಗಟೆಯ ಚೂರ್ಣ ಕಾಲುತೊಲೆಯಿಂದ ಅರ್ಧ ತೊಲ, ಎಲೆಯಚೂರ್ಣ ಒಂದರಿಂದ ಎರಡುತೊಲ, ಸ್ವರಸ 2 ತೊಲ, ಮತ್ತು ಕ್ವಾಥ 3, 4 ತೊಲವನ್ನು ರೋಗೋಕ್ತ ಅನುಪಾನದಲ್ಲಿ ಕೊಡುವ ಕ್ರಮವಿದೆ.

**91. ಗಿರಿಕರ್ಣಿಕೆ** (ಗಿಡಕರ್ಣಿಕ)—ಇದರಲ್ಲಿ ಬಿಳಿಯ ಮತ್ತು ನೀಲಿಯ ಎರಡು ಜಾತಿಗಳಿವೆ. ಇವೆರಡರ ರಾಸಾಯನಿಕ ಸಂಘಟನಾಶಕ್ತಿಯೂ ಒಂದೇ ಆಗಿರುತ್ತದೆ. ಇವು ಶೀತವೀರ್ಯವುಳ್ಳವುಗಳಾಗಿದ್ದು ವಿಪಾಕದಲ್ಲಿ ಎರಡೂ ಕಟು. ಸ್ನಿಗ್ಧ ಆದರೆ ತಿಕ್ತ ಮತ್ತು ಕಷಾಯರಸದ ಪ್ರಾಧಾನ್ಯತೆಯಲ್ಲಿ ನೀಲಿಯದಕ್ಕಿಂತ ಬಿಳಿಯದು ವಿಶೇಷ ಗುಣದಾಯಕವೆಂದು ಕಂಡುಬಂದಿದೆ. ಇದು ಶೀತಲವೂ, ಒಗರೂ, ಸ್ವಲ್ಪ ಕಹಿಯೂ ಇದ್ದು ತ್ರಿದೋಷ, ದಾಹ, ಶೂಲೆ, ಆಮ, ಪಿತ್ತ ವಿಕಾರ, ಶೋಥ, ಕ್ರಿಮಿ, ಕುಷ್ಠ, ವ್ರಣ, ಗ್ರಹಪೀಡೆ, ಶ್ಲೀಪದ, ಗಂಡಮಾಲಾ ಮೊದಲಾದುವುಗಳನ್ನು ಪರಿಹರಿಸುತ್ತದೆ ಮತ್ತು ಬುದ್ಧಿವರ್ಧಕವೂ, ನೇತ್ರಹಿತ ಕಾರಿಯೂ, ವಿರೇಚಕವೂ, ಮೂತ್ರನಿಸ್ಸಾರಕವೂ ಮತ್ತು ಚೇಳು, ಸರ್ಪ ಮೊದಲಾದುವುಗಳ ವಿಷನಾಶಕವೂ ಆಗಿದೆ. ಇದರ ಬೇರಿನ ತೊಗಟೆಯ ಚೂರ್ಣ 5 ರಿಂದ 15 ಗುಂಜಿಯವರೆಗೂ, ಎಲೆಯ ಚೂರ್ಣ 5 ರಿಂದ 30 ಗುಂಜಿಯವರೆಗೂ, ಎಲೆಯ ಸ್ವರಸ 1 ರಿಂದ 2 ತೊಲೆಯವರೆಗೂ ಮತ್ತು ಬೀಜದ ಚೂರ್ಣ 5 ರಿಂದ 15 ಗುಂಜಿಯವರೆಗೂ ಹಾಲು, ಸಕ್ಕರೆ, ಜೇನು ಮೊದಲಾದುವುಗಳ ಅನುಪಾನದಲ್ಲಿ ಕೊಡುವ ನಿಯಮವಿದೆ.

**92. ಗುಗ್ಗುಲ**—ಇದರಲ್ಲಿ ಹೇಮಾಭ, ಮಹಿಸಾಕ್ಷಿ, ಪದ್ಮ, ಕುಮುದ, ಮಹಾನೀಲಗಳೆಂದು ಐದು ಬಗೆಗಳುಂಟು. ಇವುಗಳಲ್ಲೆಲ್ಲ ಹೇಮಾಭ ಮತ್ತು ಮಹಿಸಾಕ್ಷಿ ಗುಗ್ಗುಲಗಳು ಶ್ರೇಷ್ಠವೆಂದು ಪರಿಗಣಿಸಲಾಗಿದೆ. ಇದು ಅತಿ ಲಘುವೂ, ಸ್ನಿಗ್ಧವೂ, ಅಂಟೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ; ಅಲ್ಲದೆ; ಇದು ಮೂತ್ರಕಾರಕವೂ, ಕಾಮೋತ್ತೇಜಕವೂ, ಹೃದಯಕ್ಕೆ ಬಲಕೊಡುವಂತಹುದೂ, ವೇದನಾಹರವೂ, ರಸಾಯನವೂ, ಶೀತಪ್ರಶಮನವೂ, ಆರ್ತವಕಾರಕವೂ ಆಗಿರುತ್ತದೆ. ಇದರಿಂದ ವ್ರಣ, ಅಶ್ಮರಿ, ಮೂಲವ್ಯಾಧಿ, ಕ್ರಿಮಿದೋಷ, ಬಾವು, ವಾತ ವಿಕಾರಗಳು ಮತ್ತು ರಕ್ತದೋಷಕವೂ ಕೂಡ ನಿವಾರಣೆಯಾಗುತ್ತದೆ. ಇದಲ್ಲದೆ ರೋಗೋಕ್ತವಾದ ಅನುಪಾನದೊಡನೆ ಇದು ಅಗ್ನಿಮಾಂದ್ಯ, ಗೃಧ್ರಸಿ, ಪ್ರವಾಹಿಕಾ, ಗ್ರಂಥಿ, ಕುಷ್ಠ, ಚರ್ಮರೋಗವೇ ಮೊದಲಾದ ಅನೇಕ ರೋಗಗಳನ್ನೂ ಪರಿಹರಿಸುತ್ತದೆ. ಹಾಲು, ಸಕ್ಕರೆ, ಜೇನು ಇದಕ್ಕೆ ಸಾಮಾನ್ಯ ಅನುಪಾನಗಳು. ಪ್ರಮಾಣ–3 ಗುಂಜಿಯಿಂದ 15–ಗುಜಿಯವರೆಗೆ.

**93. ಗುಲಗಂಜಿ**—ಇದರಲ್ಲಿ ಕೆಂಪು, ಬಿಳಿದು ಮತ್ತು ಕಪ್ಪು ಹೀಗೆ ಮೂರು ಜಾತಿಗಳಿದ್ದರೂ ಇವುಗಳ ಬಳ್ಳಿಯು ನೋಡಲು ಮತ್ತು ಗುಣಧರ್ಮಗಳಲ್ಲಿ ಕೂಡ ಒಂದೇ ಆಗಿರುತ್ತವೆ, ಇದು ಲಘುವೂ, ರೂಕ್ಷವೂ, ತೀಕ್ಷ್ಣವೂ, ಒಗರೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ; ಇದರಲ್ಲಿ ವೀರ್ಯವರ್ಧಕ,ಕಫನಾಶಕ,ಕುಷ್ಠಘ್ನ, ವ್ರಣರೋಪಣ, ವೇದನಾಹರ ಗುಣಗಳಿದ್ದು ಇದರಿಂದ ಇಂದ್ರಲುಪ್ತ, ಕ್ರಿಮಿದೋಷ ವ್ರಣ, ಭ್ರಮೆ, ಶ್ವಾಸರೋಗ, ಬಾಯಾರಿಕೆ ಮೊದಲಾದ ರೋಗಗಳು ನಿವಾರಣೆಯಾಗುತ್ತವೆ. ಇದಕ್ಕೆ ಗರ್ಭಧಾರಣೆ ಮಾಡಿಸುವಶಕ್ತಿ ಇದ್ದು ಹೆಚ್ಚಿನ ಪ್ರಮಾಣದಲ್ಲಿ ತೆಗೆದುಕೊಂಡರೆ ಮತ್ತೇರಿಸುವ ಗುಣವಿದೆ; ಇದು ವಿಷಘ್ನವೂ ಹೌದು ಇದರ ಬೀಜದ ಚೂರ್ಣ 5–ಗುಂಜಿಯಿಂದ 15 ಗುಂಜಿಯವರೆಗೆ–ತುಪ್ಪ, ಹಾಲು, ಜೇನುಗಳ ಅನುಪಾನದಲ್ಲಿ ತೆಗೆದುಕೊಳ್ಳುವ ಕ್ರಮವಿದೆ.

**94. ಗುಲಾಬಿ**—ಇದು ಲಘು, ಸ್ನಿಗ್ಧ, ಒಗರು, ಮಧುರ, ರೋಚಕ, ವಿಪಾಕದಲ್ಲಿ ಶೀತವೀರ್ಯವುಳ್ಳದ್ದಾಗಿರುತ್ತದೆ ಮತ್ತು ಹೃದ್ಯವೂ, ತ್ರಿದೋಷ ಶಾಮಕವೂ, ದೀಪನವೂ, ಪಾಚನವೂ, ಅನುಲೋಮನವೂ, ಗ್ರಾಹಿಯೂ, ಮೃದು ರೇಚನವೂ, ಮೇದವೂ, ಸೌಮನಸ್ಯಜನಕವೂ, ವರ್ಣ್ಯವೂ, ದುರ್ಗಂಧನಾಶಕವೂ, ದಾಹಪ್ರಶಮನವೂ,ಧಾತುವರ್ಧಕವೂ,ವಾಜೀಕರಣಕಾರಿಯೂಆಗಿದ್ದು ಶೋಥ,ವ್ರಣ, ತೃಗ್ದೋಷ,ಜ್ವರ, ಪಚನವಿಕಾರ,ಮುಖಪಾಕ, ಮಸ್ತಿಷ್ಕ ದೌರ್ಬಲ್ಯ,ಕೋಷ್ಠವಾತ, ವಿಬಂಧ, ಹೃದ್ರೋಗ, ರಕ್ತಪಿತ್ತ, ರಕ್ತವಿಕಾರ, ಕ್ಲೈಬ್ಯ, ಹುಚ್ಚು ಅಪಸ್ಮಾರ ದೌರ್ಬಲ್ಯಾದಿಗಳನ್ನು ಪರಿಹರಿಸುತ್ತದೆ. ಗುಲಾಭಿಯಲ್ಲಿ ಅನೇಕ ಬಗೆಗಳುಂಟು. ದಿನದಿನವೂ ಹೊಸ ಹೊಸ ಬಗೆಯ ಗುಲಾಬಿಯ ಹೂವುಗಳನ್ನು ವಿಜ್ಞಾನಿಗಳು ಸೃಷ್ಟಿಸುತ್ತಿದ್ದಾರೆ. ಇವುಗಳಲ್ಲಿ ಎಷ್ಟೇ ವಿವಿಧತೆ ಇದ್ದರೂ ಗುಣದಲ್ಲಿ ಮತ್ತು ಔಷಧಪ್ರಯೋಗದಲ್ಲಿ ಮೂಲಗುಲಾಬಿಯೇ (ಪನ್ನಿರು ಗುಲಾಬಿ) ಶ್ರೇಷ್ಠ. ಹೂವಿನಲ್ಲಿ ಅದರ ದಳವೇ ಔಷಧ ದ್ರವ್ಯವಾಗಿದೆ. ಈ ಹೂವಿನ ದಳಗಳಿಂದ ಸಿದ್ಧಪಡಿಸಿದ ಗುಲ್ಕಂದ್ ಬಹು ಶ್ರೇಷ್ಠವಾದ ಒಂದು ಪಾಕವಾಗಿದೆ.

**95. ಗುಲಕಂದ್**—ಅಂದೇ ಕಿತ್ತಗುಲಾಬಿಯ ದಳಗಳನ್ನು ಒಂದು ಅಗಲವಾದ ಬಾಯಿ ಇರುವ ಪಿಂಗಾಣಿಯ ಅಥವಾ ಗಾಜಿನ ಪಾತ್ರೆಯಲ್ಲಿ ಒಂದು ಪದರನ್ನು ಹರವಿ ಅದರ ಮೇಲೆ ಜೇನು–ತುಪ್ಪವನ್ನೂ ಮತ್ತು ಕಲ್ಲು ಸಕ್ಕರೆಯ ಪುಡಿಯನ್ನೂ ಹಾಕಬೇಕು. ಅದರ ಮೇಲೆ ತಿರುಗಿ ಒಂದು ಪದರು ಗುಲಾಬಿಯ ದಳ ಮತ್ತು ಅದರ ಮೇಲೆ ಹೇಳಿದ ಕಲ್ಲುಸಕ್ಕರೆ ಮತ್ತು ಜೇನನ್ನು ಹಾಕಬೇಕು. ಹೀಗೆ ಒಂದು ಭಾಗ ಗುಲಾಬಿಯ ದಳವನ್ನೂ ಮತ್ತು 2 ರಿಂದ 4 ಭಾಗ

ಕಲ್ಲುಸಕ್ಕರೆ ಮತ್ತು ಜೇನನ್ನೂ ಸೇರಿಸಿ ಪಾತ್ರೆಯ ಬಾಯಿ ಬಂದುಮಾಡಿ ಆಗಾಗ ಆ ಪಾತ್ರೆಯನ್ನು ಬಿಸಿಲಿನಲ್ಲಿಡಬೇಕು. ಹೀಗೆ 1 ರಿಂದ 2 ತಿಂಗಳವರೆಗೆ ಮಾಡಿದಾಗ ಉತ್ತಮವಾದ ಗುಲಕಂದ್ ಆಗುತ್ತದೆ. ಇದರ ಸೇವನೆಯಿಂದ ಮಲಾವರೋಧ, ದಾಹ, ಪಿತ್ತ, ಸ್ತ್ರೀಯರ ಅತಿಯಾದ ರಜಸ್ರಾವ ಇವುಗಳು ಪರಿಹಾರವಾಗುತ್ತವೆ.

**96. ಗೇರು**(ಕೇರು)—ಇದು ತೀರ ಉಷ್ಣವೀರ್ಯವುಳ್ಳದ್ದಾಗಿದ್ದು ತೀಕ್ಷ್ಣವೂ, ದೀಪನವೂ, ಪಾಚನವೂ ಆಗಿರುತ್ತದೆ. ಇದಕ್ಕೆ ಬೆವರನ್ನೂ ಮತ್ತು ಮೂತ್ರವನ್ನೂ ಉಂಟುಮಾಡುವ ಶಕ್ತಿ ಇದ್ದು, ಮೂತ್ರವ್ಯಾಧಿಗಳನ್ನೂ, ಕುಷ್ಠವನ್ನೂ ಮೂಲವ್ಯಾಧಿಯನ್ನೂ ಪರಿಹರಿಸುತ್ತದೆ. ವಾತ ಕಫ ವಿಕಾರಗಳನ್ನೂ ನಿವಾರಿಸುತ್ತದೆ. ಆದರೆ ಇದನ್ನು ಗರ್ಭಿಣಿಯರಿಗೂ, ಚಿಕ್ಕ ಬಾಲಕರಿಗೂ ಮತ್ತು ತೀರವೃದ್ಧರಿಗೂ ಕೊಡಕೂಡದು; ಅಲ್ಲದೆ ಇದನ್ನು ಸೇವಿಸುವಾಗ ಸಾಕಷ್ಟು ಹಾಲು, ಮೊಸರು, ತುಪ್ಪ, ಸಕ್ಕರೆಗಳನ್ನು ತೆಗೆದುಕೊಳ್ಳಬೇಕು; ನೀರು ಉಪ್ಪು ಇದಕ್ಕೆ ವಿರುದ್ಧ; ಬಾಯಾರಿಕೆಯಾದಾಗಲೂ ಹಾಲನ್ನೇ ಕೊಡಬೇಕೆಂದಿದೆ. ಕೇರಿನ ಔಷಧವನ್ನು ಕೊಡುವುದಕ್ಕೆ ಮೊದಲು ಶೋಧನ, ಬೃಂಹಣ ಕ್ರಿಯೆ ನಡೆಸುವುದೊಳ್ಳೆಯದು. ಇದರ ಚಿಕಿತ್ಸೆ ನಡೆಯುವಾಗ ಉಷ್ಣ ಅಧಿಕವಾದರೆ ಹಾಲು ಮತ್ತು ತುಪ್ಪಗಳನ್ನೇ ಹೆಚ್ಚಿಗೆ ಕೊಟ್ಟು ಉಷ್ಣದ ಪರಿಹಾರಕ್ಕಾಗಿ ಹುಣಸೆಯ ಸ್ವರಸವನ್ನಾಗಲೀ ತೆಂಗಿನಕಾಯಿಯ ಹಾಲನ್ನಾಗಲೀ, ಕೊಡಬೇಕು. ಔಷಧಕ್ಕೆ ಕೇರಿನಕಾಯಿಯನ್ನೇ ಉಪಯೋಗಿಸುವ ಕ್ರಮವಿದೆ. ಬೇಸಿಗೆಯಲ್ಲಿ ಇದನ್ನು ಕೊಡುವುದು ಒಳ್ಳೆಯದಲ್ಲ. ಕೇರಿನಎಣ್ಣೆ ದಮ್ಮು, ಕೆಮ್ಮುಗಳನ್ನು ನಿವಾರಿಸುತ್ತದೆ. ಕೇರನ್ನು ಹುಣಸೆ ಎಲೆ ರಸ, ಬೆಳ್ಳುಳ್ಳಿ, ವಾಯುವಿಳಂಗ ಮಿಶ್ರಣದೊಡನೆ ತೆಂಗಿನಕಾಯಿಯ ಹಾಲು ಮತ್ತು ಕಲ್ಲುಸಕ್ಕರೆ ಸೇರಿಸಿಕೊಡುವ ಕ್ರಮವಿದೆ.

**97. ಗೋರಂಟಿ**—ಇದು ಗ್ರಾಹಿ ಗುಣವುಳ್ಳದ್ದಾಗಿ ಚರ್ಮರೋಗ ಪರಿಹಾರಕವಾಗಿದೆ. ಇದು ಉಷ್ಣವೀರ್ಯವುಳ್ಳದ್ದಾಗಿಯೂ, ಘಾಟುಳ್ಳದ್ದಾಗಿಯೂ, ಮಧುರ ರಸಯುಕ್ತವಾಗಿಯೂ ಇರುತ್ತದೆ. ಇದರಿಂದ ವಾತ, ಕಫ, ಶೂಲೆ, ಕುಷ್ಠ ಕಾಸಗಳೂ, ಶೋಥೆಯೂ, ಪಲಿತಪಲಿತವೂ ಪರಿಹಾರವಾಗುತ್ತದೆ; ವಿಷ ನಿವಾರಣೆಯಾಗುತ್ತದೆ: ಇದರಲ್ಲಿ ಬಿಳಿಯ, ಕೆಂಪಿನ ಮತ್ತು ನೀಲಿಯ ಬಣ್ಣದ ಹೂವುಗಳ ಮೂರು ಜಾತಿಗಳಿದ್ದರೂ ಗುಣಧರ್ಮಗಳಲ್ಲಿ ಇವು ಮೂರೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಆಗಿರುತ್ತವೆ. ಇದರ ಎಲೆ, ಚಕ್ಕೆ, ಬೇರು, ಬೀಜ, ಹೂ ಈ ಪಂಚಾಂಗಗಳೂ ಔಷಧದ್ರವ್ಯಗಳಾಗಿರುತ್ತವೆ. ಎಲೆಯ ಸ್ವರಸವನ್ನೂ, ಬೀಜ ಮತ್ತು ಚಕ್ಕೆಗಳ ಚೂರ್ಣವನ್ನೂ ಔಷಧರೂಪವಾಗಿ ಉಪಯೋಗಿಸುವ ಕ್ರಮವಿದೆ.

ಇದರ ಕಿತ್ತಲೆಬಣ್ಣದ ರಸವನ್ನು ಅಂಗೈ ಅಂಗಾಲಿಗೂ, ಉಗುರಿಗೂ ಹಚ್ಚುವ ರೂಢಿಯಿದೆ. 5 ರಿಂದ 15 ಗುಂಜಿ ಜೀರಿಗೆ ಪುಡಿ, ಜೇನುಗಳ ಅನುಪಾನದಲ್ಲಿ ಸೇವನೆ.

**98. ಗೋಡಂಬಿ**—ಇದು ಉಷ್ಣವೀರ್ಯವುಳ್ಳದ್ದಾಗಿದ್ದು ಲಘುವೂ, ಸ್ನಿಗ್ಧವೂ, ಮಧುರವೂ ಆಗಿರುವುದಲ್ಲದೆ ವಿಪಾಕದಲ್ಲೂ ಮಧುರವೇ ಆಗಿರುತ್ತದೆ; ಅಲ್ಲದೆ ಇದು ವಾತಶಾಮಕವೂ, ದೀಪಕವೂ, ಅನುಲೋಮವೂ, ಮೂತ್ರಲವೂ, ವೃಷ್ಯವೂ, ವಾಜೀಕರಣವೂ, ಬೃಂಹಣವೂ, ರಕ್ತಶೋಧಕವೂ, ಆಗಿದ್ದು ಅಗ್ನಿಮಾಂದ್ಯ, ರಕ್ತವಿಕಾರ, ವಾತವಿಕಾರ, ಮೂತ್ರಕೃಚ್ಛ್ರ, ಕೃಶತೆ, ಅರ್ಬುದ, ವ್ರಣ, ಮೂಲವ್ಯಾಧಿ, ಕುಷ್ಠ, ಶ್ವೇತಕುಷ್ಠ, ಮೊದಲಾದ ಚರ್ಮ ರೋಗಗಳನ್ನೂ ರಕ್ತಾತಿಸಾರವನ್ನೂ ಮತ್ತು ಹೃದಯ ಹಾಗೂ ನಾಡಿಗಳ ದುರ್ಬಲತೆಯನ್ನೂ ನಷ್ಟಗೊಳಿಸುತ್ತದೆ. ಗೋಡಂಬಿಯ ಸಿಪ್ಪೆಯ ತೈಲವು ಕ್ರಿಮಿಘ್ನವೂ, ವಿಷಘ್ನವೂ, ಕುಷ್ಠಘ್ನವೂ, ವೇದನಾಹರವೂ ಆಗಿದೆ. ಇದರ ಬೀಜದಲ್ಲೂ, ತೈಲದಲ್ಲೂ, ಅತಿ ಶ್ರೇಷ್ಠವಾದ ಪೌಷ್ಟಿಕಾಂಶವಿದ್ದು ಅದು ಶೀಘ್ರವಾಗಿ ಶರೀರದಲ್ಲಿ ಸೇರಿಕೊಳ್ಳುತ್ತದೆ. ಇದರ ತೊಗಟೆಯು ಸಂಕೋಚಕ ಶಕ್ತಿಯುಳ್ಳದ್ದಾಗಿದ್ದು ಧಾತುವರ್ಧಕವೂ, ಗ್ರಾಹಿಯೂ ಆಗಿದೆ; ತೊಗಟೆಯ ಕಷಾಯವು ಸಂಗ್ರಹಣಿಯ ಪರಿಹಾರಕವಾಗಿದೆ. ಆದರೆ ಇದು ಪಿತ್ತಕಾರಕವಾಗಿರುವುದರಿಂದ ಉಷ್ಣ ಪ್ರಕೃತಿಯವರಿಗೆ ಅಹಿತಕರವೆಂಬುದನ್ನು ಮರೆಯಲಾಗದು; ಇದರ ನಿವಾರಣೆಗಾಗಿ ದಾಳಿಂಬದಹಣ್ಣಿನ ಅಥವಾ ಲಿಂಬೆಹಣ್ಣಿನ ಶರಬತ್ತನ್ನು ಕೊಡಬೇಕು; ಇದು ಬಹುರುಚಿಯಾದ ಖಾದ್ಯವಸ್ತುವಾಗಿರುವುದರಿಂದ ರುಚಿಗೆ ಮರುಳಾಗಿ ಹೆಚ್ಚಾಗಿ ತಿನ್ನುವುದು ಒಳ್ಳೆಯದಲ್ಲ; 1–3 ತೊಲ ತಿಂದರೆ ಸಾಕು; ತೈಲ ಕೇವಲ 3–4 ಗುಂಜಿಯೂ ಸಾಕು.

**99. ಗೋಧಿ**—ಇದು ಗುರು, ಮಧುರ, ಸ್ನಿಗ್ಧ, ಬೃಂಹಣ, ಶೀತವೀರ್ಯ, ಪೌಷ್ಟಿಕ, ವೀರ್ಯವರ್ಧಕ, ರುಚಿಕರ, ಕಾಮೋದ್ದೀಪಕ, ಸಂಧಾನಕರವರ್ಣ್ಯ (ಕಾಂತಿದಾಯಕ), ವಾತಪಿತ್ತಶಾಮಕ ಮತ್ತು ವ್ರಣರೋಪಣದಲ್ಲಿ ಹಿತಕಾರಿಯಾಗಿದೆ; ಹೊಸ ಗೋಧಿಯು ಸ್ವಲ್ಪ ಕಫವನ್ನುಂಟುಮಾಡುತ್ತದೆ; ಆದರೆ ಅದೇ ಹಳೆಯದು ಕಫನಾಶಕವಾಗಿದೆ. ಇದು ಮಧುಮೇಹಕ್ಕೆ ಹಿತಕಾರಿ. ಕೆಮ್ಮು, ಎದೆಶೂಲೆ ಮಸ್ತಿಷ್ಕದ ದೌರ್ಬಲ್ಯ ಮತ್ತು ನಪುಂಸಕತೆಯ ಮೇಲೆ ಬಾದಾಮಿ ಮತ್ತು ಸಕ್ಕರೆಗಳನ್ನು ಸೇರಿಸಿದ ಗೋಧಿಯ ಖಾದ್ಯವು ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತದೆ; ಗೋಧಿಯಿಂದ ಬಗೆ ಬಗೆಯ ಖಾದ್ಯಗಳನ್ನೂ ಪೇಯಗಳನ್ನೂ ಮಾಡಲು ಬರುತ್ತದೆ; ಗೋಧಿಗೆ ಮೊಳಕೆ ಬರಿಸಿ ಅದರ ಶೈತ್ಯವನ್ನು ತಕ್ಕಮಟ್ಟಿಗೆ ಮುರಿದು

ನಿವಾರಿಸಿ. ಬೀಸಿ ಅಥವಾ ಕುಟ್ಟಿ ಪ್ರತಿದಿನ ಸಕ್ಕರೆ ಮತ್ತು ಹಾಲಿನೊಡನೆ ಮಿತ ಪ್ರಮಾಣದಲ್ಲಿ ಸೇವಿಸುವುದರಿಂದ ಅಪಾರವಾದ ಶಕ್ತಿಯೂ, ವೀರ್ಯವೃದ್ಧಿಯೂ ಉಂಟಾಗುತ್ತದೆ.

**100. ಗೋಣಿಸೊಪ್ಪು**—ಗೋಣಿಸೊಪ್ಪು ಶೀತವೀರ್ಯವುಳ್ಳದ್ದಾಗಿದ್ದು ಮಧು ರಸಯುಕ್ತವಾಗಿರುತ್ತದೆ. ಇದರಿಂದ ರಕ್ತದೋಷವೂ, ಸಂಗ್ರಹಣಿಯೂ, ಮೂಲವ್ಯಾಧಿಯೂ, ನಿವಾರಣೆಯಾಗುವುದಲ್ಲದೆ ಇದು ಮೂತ್ರನಾಳದಲ್ಲಿಉ ಕಲ್ಲನ್ನು(ಅಶ್ಮರಿ) ಪರಿಹರಿಸುತ್ತದೆ; ಕುಷ್ಠ, ರಕ್ತಪಿತ್ತ, ಉಷ್ಣದ ಕೆಮ್ಮು, ಪಿತ್ತಜನ್ಯ ಭೇದಿ, ಪಿತ್ತಜ್ವರಗಳಮೇಲೆ ಇದು ಸತ್ಪರಿಣಾಮವನ್ನುಂಟುಮಾಡುತ್ತದೆ. ಅಲ್ಲದೆ ಇದು ತ್ರಿದೋಷನಾಶಕವಾಗಿದ್ದು ಮೂತ್ರವಿಕಾರಗಳನ್ನೂ, ಸ್ತ್ರೀಯರ ಆರ್ತವದೋಷವನ್ನೂ ನಿವಾರಿಸುತ್ತದೆ.

**101. ಗೋರಿಕಾಯಿ**—(ಚೌಳಿಕಾಯಿ)—ಇದು ಒಗರೂ, ಗುರುವೂ ಆಗಿದ್ದು ಶೀತವೀರ್ಯಯುಕ್ತವಾಗಿರುತ್ತದೆ ಮತ್ತು ಇದು ಅತಿಪಿತ್ತಕಾರಕವಾಗಿರುವುದರಿಂದ ಅನೇಕ ರೋಗಗಳಲ್ಲಿ ಇದನ್ನು ನಿಷೇಧಿಸಲಾಗಿದೆ. ಇದು ರುಚಿಯಾಗಿರುವುದರಿಂದ ಹೆಚ್ಚಿಗೆ ತಿಂದರೆ ಅಜೀರ್ಣ ರೋಗವನ್ನೂ ಉಂಟುಮಾಡುತ್ತದೆ. ಆದರೂ ತರಕಾರಿಯ ಬದಲಾವಣೆಗಾಗಿ ಆಗೊಮ್ಮೆ ಈಗೊಮ್ಮೆ ಮಿತವಾಗಿ ಉಪಯೋಗಿಸುವುದರಲ್ಲಿ ಹೆಚ್ಚಿನ ಬಾಧಕವೇನೂ ಇಲ್ಲ.

**102. ಚವ್ಯ**—ಚವ್ಯವು ಕಫವಾತಶಾಮಕವಾಗಿದೆ; ಇದು ಪಿತ್ತವರ್ಧಕ, ದೀಪಕ, ಪಾಚಕ, ವಾತಾನುಲೋಮಕ, ಯಕೃದುತ್ತೇಜಕ ಮತ್ತು ಕ್ರಿಮಿಘ್ನವೂ ಹೌದು; ಇದರಿಂದ ಅರುಚಿ, ಅಗ್ನಿಮಾಂದ್ಯ, ಅಜೀರ್ಣ, ಅತಿಸಾರ, ಉದರರೋಗ, ವೃಕ್ಕವ್ಯಾಧಿ, ಕಾಸ, ಶ್ವಾಸ ಮೊದಲಾದ ರೋಗಗಳು ಪರಿಹಾರವಾಗುತ್ತವೆ. ಚವ್ಯದ ಚೂರ್ಣವನ್ನು ಹೊತ್ತಿಗೆ 6 ರಿಂದ 12 ಗುಂಜಿಯವರೆಗೆ ಜೇನುತುಪ್ಪದಲ್ಲಿ ಕೊಡಬೇಕೆಂಬ ನಿಯಮವಿದೆ; ಕಾಯಿಯ ಚೂರ್ಣವಾದರೆ 12 ಗುಂಜಿಯಿಂದ 25 ಗುಂಜಿಯವರೆಗೂ ಕೊಡಬೇಕು. ರೋಗಕ್ಕೆ ತಕ್ಕಂತೆ ಪಥ್ಯ, ಅನುಪಾನಗಳನ್ನು ಹೊಂದಿಸಿಕೊಳ್ಳಬೇಕು.

**103. ಚಕ್ಕೋತ** (ಹಣ್ಣು)—ಚಕ್ಕೋತವು ಲಘುವೂ, ರೂಕ್ಷವೂ, ತೀಕ್ಷ್ಣವೂ ವಿಪಾಕದಲ್ಲಿ ಆಮ್ಲವೂ, ಶೀತವೀರ್ಯವೂ (ಕೆಲವರ ಅಭಿಪ್ರಾಯದಲ್ಲಿ ಉಷ್ಣವೀರ್ಯವೆಂದಿದೆ). ಕಫವಾತ ಶಾಮಕವೂ, ಪಿತ್ತವರ್ಧಕವೂ, ರೇಚಕವೂ ದೀಪನವೂ, ಪಾಚನವೂ, ಅನುಲೋಮನವೂ, ಬೇದನವೂ, ಹೃದಯೋತ್ತೇಜಕವೂ, ಮೂತ್ರಲವೂ, ಆಮ್ಲದೋಷಹರವೂ ಆಗಿದ್ದು ಅರುಚಿ, ಅಗ್ನಿಮಾಂದ್ಯ

ಅಜೀರ್ಣ, ವಿಬಂಧ, ಗುಲ್ಮ, ಪ್ಲೀಹ, ರಕ್ತಪಿತ್ತ ಕಾಸ, ಶ್ವಾಸ, ಭ್ರಮೆ, ಮುಕ್ಕದ್ವಿಕಾರ, ಹಿಕ್ಕಾ, ಮೂತ್ರಕೃಚ್ಛ್ರ, ಉದಾವರ್ತ, ಮೇದ ಮೊದಲಾದ ರೋಗಗಳನ್ನು ಪರಿಹರಿಸುತ್ತದೆ. ಚಕ್ಕೋತದ ಹಣ್ಣಿನ ರಸದೊಡನೆ ಸಕ್ಕರೆ ಬೆರೆಸಿ ಕುಡಿಯುವುದರಿಂದ ಪಿತ್ತಪ್ರಕೋಪ, ರಕ್ತೋದ್ವೇಗ ಮತ್ತು ಮದಾತ್ಯಯಗಳ ನಿವಾರಣೆಯಾಗುತ್ತವೆ. ಆದರೆ ಈ ರಸವು ಬಹುಬೇಗ ಕೆಡುವುದರಿಂದ ಆಗಿಂದಾಗ್ಗೆ ಹೊಸ ರಸವನ್ನೇ ತೆಗೆದು ಉಪಯೋಗಿಸಬೇಕು; ಇದರ ಹಣ್ಣಿನರಸ 1 ರಿಂದ 5 ತೊಲೆಯವರೆಗೂ, ಎಲೆಯರಸ ಅರ್ಧದಿಂದ 1 ತೊಲೆಯವರೆಗೂ ಕೊಡುವ ಕ್ರಮವಿದೆ.

**104. ಚಕ್ಕೋತದ ಸೊಪ್ಪು**—ಚಕ್ಕೋತದ ಸೊಪ್ಪು ಲಘುವೂ, ಕಷಾಯವೂ, ವಿಪಾಕದಲ್ಲಿ ಮಧುರವೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಇದರ ಸಮೂಲವನ್ನು ಔಷಧರೂಪವಾಗಿಯೂ ಮತ್ತು ಆಹಾರ ರೂಪವಾಗಿಯೂ ಉಪಯೋಗಿಸುವ ಪದ್ಧತಿಯುಂಟು. ಇದು ಪ್ಲೀಹವೃದ್ಧಿ, ಜ್ವರ, ಜ್ವರದ ನಂತರದ ನಿಶ್ಶಕ್ತಿ, ಮಲಬದ್ಧತೆ, ಕಾಮಾಲೆ, ಮೂಲವ್ಯಾಧಿ, ಉದರಶೂಲೆ, ಗಂಟಲಿನಬಾಧೆಗಳನ್ನು ನಿವಾರಿಸುತ್ತದೆ, ಹೃದ್ರೋಗ, ನೇತ್ರದೋಷಗಳಲ್ಲೂ ಒಳ್ಳೆಯದು. ಇದರಲ್ಲಿ ಮೂತ್ರವನ್ನು ವೃದ್ಧಿಪಡಿಸಿ ಲೈಂಗಿಕ ಶಕ್ತಿಯನ್ನು ಹೆಚ್ಚಿಸುವ ಗುಣವಿದೆ. ಇದು ದೀಪಕವೂ, ಪಾಚಕವೂ ಆಗಿದ್ದು ಜಠರಾಗ್ನಿಯನ್ನು ಹೆಚ್ಚಿಸುತ್ತದೆ. ಆಮವಿಕಾರವನ್ನು ದೂರಮಾಡುತ್ತದೆ. ಇದು ಲಘುವಿರೇಚಕವಾಗಿರುವುದರಿಂದ ಮಲಬದ್ಧತೆಯನ್ನು ನಿವಾರಣೆಮಾಡುವುದಲ್ಲದೆ ಮೂಲವ್ಯಾಧಿ, ಕುಷ್ಠ, ಕ್ರಿಮಿದೋಷಗಳನ್ನು ಪರಿಹರಿಸುತ್ತದೆ. ಅರುಚಿ, ಗುಲ್ಮ, ವಾಂತಿಗಳಲ್ಲಿದು ಪಥ್ಯವಾಗಿದ್ದು ಆ ರೋಗಗಳ ನಿವಾರಣಾ ಶಕ್ತಿಯನ್ನು ಹೊಂದಿರುತ್ತದೆ. ಇದರ ಸೇವನೆಯಿಂದ ಎದೆಶೂಲೆ, ಉದರದ ಬೇನೆಗಳು ಪರಿಹಾರವಾಗುತ್ತವೆ.

**ವಿ. ಸೂ.:**—ಚಕ್ಕೋತದ ಹಣ್ಣಿಗೂ, ಚಕ್ಕೋತದಸೊಪ್ಪಿಗೂ ಸಂಬಂಧವಿಲ್ಲ: ಅದು ಫಲವೃಕ್ಷ, ಇದು ತರಕಾರಿಯ ಸೊಪ್ಪು.

**105. ಚಪ್ಪರದ ಅವರೆ**—ಇದರಲ್ಲಿ ಕಪ್ಪು ಮತ್ತು ಬಿಳಿಯ ಎರಡುಜಾತಿಗಳುಂಟು. ಆದರೆ ಇದರ ಗುಣಧರ್ಮಗಳು ಗೋರಿಯ ಕಾಯಿಯಂತೆಯೇ ಇರುವುದರಿಂದ ಇದನ್ನಿಲ್ಲಿ ಪುನಃ ಬರೆದಿಲ್ಲ. ಆದುದರಿಂದ ಗೋರಿಯ ಕಾಯನ್ನು ನೋಡಿ

**106. ಚಿಕ್ಕೂ (ಸಪೋಟ)**—ಇದರ ಹಣ್ಣು ಪಿತ್ತಶಾಮಕ, ಪೌಷ್ಟಿಕ, ಜ್ವರನಾಶಕವಾಗಿದ್ದು ಜ್ವರದ ರೋಗಿಗಳಿಗೆ ಪಥ್ಯವಾಗಿರುತ್ತದೆ. ತೊಗಟೆಯು ಸಂಕೋಚಕ, ಪೌಷ್ಟಿಕ ಮತ್ತು ಜ್ವರಹರ; ಇದು ಜ್ವರದ ಮೇಲೆ ಸಿಂಕೋನದಂತೆ

ಕೆಲಸ ಮಾಡುತ್ತದೆ; ಜೀರ್ಣಜ್ವರದ ಮೇಲೂ ಮತ್ತು ಅತಿಸಾರದ ಮೇಲೂ ಇದರ ಪ್ರಯೋಗ ಮಾಡಬಹುದು; ಬೀಜವು ಮೂತ್ರಲವಾಗಿದೆ; ಇದರ ತ್ವಕ್ಕು ಮತ್ತು ಬೀಜಗಳ ಚೂರ್ಣವನ್ನು 6 ರಿಂದ 18 ಗುಂಜೆಯವರೆಗೆ ಕೊಡಬಹುದು. ಅನುಪಾನ ತಣ್ಣೀರು. ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಟ್ಟರೆ ಭೇಧಿಯಾಗುತ್ತದೆಯಲ್ಲದೆ ನಿರ್ಬಲತೆಯೂ ಉಂಟಾಗುತ್ತದೆ. ಸಪೋಟವನ್ನು ಚೆನ್ನಾಗಿ ಬಲಿತು ಹಣ್ಣಾದುದನ್ನು ಮಾತ್ರ ಉಪಯೋಗಿಸಬೇಕೇ ಹೊರತು ಬಲಿಯದ ಕಾಯಿಗಳನ್ನು ಕೃತಕವಾಗಿ ಹಣ್ಣುಮಾಡಿ ಉಪಯೋಗಿಸಬಾರದು. ಇಂತಹುದು ಮಲಬದ್ಧತೆ, ಅವಚನಗಳನ್ನುಂಟುಮಾಡುತ್ತದೆ.

**107. ಚಿತ್ರಮೂಲ**—ಇದು ಒಳ್ಳೆಯ ಅಗ್ನಿದೀಪಕವಾಗಿದೆ. ಗರ್ಭಾಶಯದ ವಿಕಾರಗಳಲ್ಲೂ, ವಾತ, ಪಿತ್ತ, ಜ್ವರಗಳಲ್ಲೂ, ಸೂತಿಕಾಜ್ವರಗಳಲ್ಲೂ ಚಿತ್ರಮೂಲವು ಸತ್ಪರಿಣಾಮವನ್ನುಂಟುಮಾಡುತ್ತದೆ. ಗರ್ಭಿಣಿಯರಿಗೆ ಚಿತ್ರಮೂಲವನ್ನು ಕೊಡಬಾರದು. ಚಿತ್ರಮೂಲದ ಬೇರು, ಬೇರಿನ ತೊಗಟೆ, ಕಾಂಡದ ತೊಗಟೆ ಮತ್ತು ಎಲೆಯೂ ಕೂಡ ಔಷಧಕ್ಕೆ ಬರುತ್ತದೆ. ಹೊಟ್ಟೆಯೊಳಗೆ ಕೊಡುವಾಗ ಶುದ್ಧಿಮಾಡಿಯೇ ಕೊಡಬೇಕು. ಇದನ್ನು ಚೂರ್ಣದ ರೂಪದಲ್ಲಿಯೇ ಹೆಚ್ಚಾಗಿ ಹೊಟ್ಟೆಯೊಳಗೆ ಕೊಡುವ ರೂಢಿಯುಂಟು. ಹೊರಗಿನ ಲೇಪನಕ್ಕೆ ತೇಯ್ದು ಹಚ್ಚುವ ಕ್ರಮವಿದೆ. ಚಿತ್ರಮೂಲದ ಚೂರ್ಣವನ್ನು ಹೊತ್ತಿಗೆ 5 ರಿಂದ 10 ಗುಂಜಿಯವರೆಗೂ ಕೊಡಬಹುದು; ಇದರಿಂದ ಸಿದ್ಧಗೊಳಿಸಿದ ತೈಲವು, ವೇದನಾಹರವೂ, ವ್ರಣನಾಶಕವೂ ಆಗಿರುತ್ತದೆ.

**108. ಚಿರಾಯತ**—ಇದು ಲಘುವೂ, ರೂಕ್ಷವೂ, ತಿಕ್ತವೂ, ಕಟುವೂ, ವಿಪಾಕದಲ್ಲೂ ಕೂಡ ಕಟುವೇ ಆಗಿದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ; ಅಲ್ಲದೆ ಇದು ಕಫಪಿತ್ತ ಶಾಮಕವೂ, ದೀಪನವೂ, ತೃಷ್ಣಾನಿಗ್ರಹವೂ, ಆಮಪಾಚನವೂ ಪಿತ್ತಸಾರಕವೂ, ಅನುಲೋಮನವೂ, ಕಟುಪೌಷ್ಟಿಕವೂ, ರಕ್ತಶೋಧಕವೂ, ವ್ರಣಶೋಥಹರವೂ, ಕಫಘ್ನವೂ, ಶ್ವಾಸಹರವೂ, ಸ್ತನ್ಯಶೋಧಕವೂ, ಜ್ವರಘ್ನವೂ, ದಾಹಪ್ರಶಮನವೂ, ವಾತವರ್ಧಕವೂ, ಆಗಿರುತ್ತದೆ; ಇದರಿಂದ ಅಗ್ನಿಮಾಂದ್ಯ ಅಜೀರ್ಣ, ಯಕೃದ್ವಿಕಾರ, ಕಾಮಾಲಾ, ಪಾಂಡು, ಆಧ್ಮಾನ, ಕ್ರಿಮಿರೋಗ, ರಕ್ತವಿಕಾರ, ಶೋಥ, ರಕ್ತಪಿತ್ತ, ಆಮ್ಲಪಿತ್ತ, ಕಾಸ, ಸ್ತನ್ಯವಿಕಾರ, ಚರ್ಮರೋಗ, ಗಂಡಮಾಲಾ, ಜೀರ್ಣಜ್ವರ, ವಿಷಮಜ್ವರ, ಮೂತ್ರಕೃಚ್ಛ್ರ ಮೊದಲಾದ ರೋಗಗಳು ನಿವಾರಣೆಯಾಗುತ್ತವೆ. ಚಿರಾಯುತದ ಪಂಚಾಂಗವೂ ರೋಗ ಚಿಕಿತ್ಸೆಯಲ್ಲಿ ಉಪಯೋಗಿಸಲ್ಪಡುತ್ತದೆ. ಇದನ್ನು ಚೂರ್ಣ, ಕಷಾಯ, ಕ್ವಾಥ, ಫಾಂಟಗಳ ರೂಪದಲ್ಲಿ ಬಳಸಲಾಗುತ್ತದೆ. ಕ್ವಾಥ, ಕಷಾಯಗಳಾದರೆ 5 ರಿಂದ 10 ತೊಲ,

ಚೂರ್ಣವಾದರೆ 6 ರಿಂದ 18 ಗುಂಜಿ, ಫಾಂಟವಾದರೆ 2½ ತೊಲೆಯಷ್ಟನ್ನು ಉಪಯೋಗಿಸುವ ನಿಯಮವಿದೆ. ಇದನ್ನು ದೀರ್ಘಕಾಲ ಉಪಯೋಗಿಸುವ ಸಂದರ್ಭದಲ್ಲಿ ಪ್ರಮಾಣವನ್ನು ಕಡಿಮೆಗೊಳಿಸಬೇಕು; ಅಲ್ಲವಾದರೆ ಉದರಕ್ಕೆ ಸಂಬಂಧಪಟ್ಟ ಶೈತ್ಯರೋಗ ಉಂಟಾಗುತ್ತದೆ.

**109. ಜಟಾಮಾಂಸಿ**—ಜಟಾಮಾಂಸಿಯು ಲಘುವೂ, ತೀಕ್ಷ್ಣವೂ ಸ್ನಿಗ್ಧವೂ, ತಿಕ್ತವೂ, ಕಷಾಯವೂ ಮತ್ತು ವಿಪಾಕದಲ್ಲಿ ಕಟುವೂ, ಆಗಿದ್ದು ಶೀತ ವೀರ್ಯವುಳ್ಳದ್ದಾಗಿರುತ್ತದೆ, ಇದು ಮನೋವಿಕಾರವನ್ನು ಪರಿಹರಿಸುತ್ತದೆ; ಅಲ್ಲದೆ ಇದು ತ್ರಿದೋಷಹರವೂ ಹೌದು. ಇದು ದೀಪನ, ಪಾಚನ, ವಾತಾನುಲೋಮನ, ಯಕೃದುತ್ತೇಜಕ, ಪಿತ್ತಸಾರಕ, ಶೂಲಪ್ರಶಮನ, ಹೃದಯೋತ್ತೇಜಕ ಹೃದ್ಯ, ರಕ್ತಸ್ತಂಭನ, ಶೋಥಹರ, ಕಫನಿಸ್ಸಾರಕ, ಮೂತ್ರಲ, ವಾಜೀಕರಣ ಆರ್ತವಜನನ, ವರ್ಣ್ಯ, ಸಂಜ್ಞಾಸ್ಥಾಪನ ಮತ್ತು ಮೇಧ್ಯವಾಗಿದೆ. ಇದರಿಂದ ಸ್ಮೃತಿಹ್ರಾಸ (ನೆನಪಿನಶಕ್ತಿ ಕಡಿಮೆಯಾಗಿರುವುದು), ಶಿರಃಶೂಲೆ, ಆಮಾಶಯ ಶೋಥ, ಕಾಮಿಲಾ, ಹೃದಯಶೈಥಿಲ್ಯ, ರಕ್ತಪಿತ್ತ, ಕಾಸ, ಶ್ವಾಸ, ಮೂತ್ರ ಕೃಚ್ಛ್ರ, ಬಸ್ತಿಶೋಥ, ಜೀರ್ಣಪ್ರಮೇಹ, ನಪುಂಸಕತ್ವ, ಚರ್ಮರೋಗ, ಅಪಸ್ಮಾರ ಮೊದಲಾದ ಅನೇಕ ರೋಗಗಳು ನಿವಾರಣೆಯಾಗುತ್ತವೆ. ಇದರ ಫಾಂಟವನ್ನು 2 ರಿಂದ 5 ತೊಲೆಯವರೆಗೆ ದಿನಕ್ಕೆ 3 ಬಾರಿ ಕೊಡುವ ಕ್ರಮವಿದೆ. ಅಥವಾ ಚೂರ್ಣವಾದರೆ 1 ರಿಂದ 5 ತೊಲೆಯವರೆಗೆ ಬಿಸಿನೀರಿನಲ್ಲಿ 4–5 ಗಂಟೆ ನೆನೆಯಿಟ್ಟು, ಹಿಸುಕಿ, ಸೋಸಿ, ಕೊಡಬೇಕು; ಭೂತಾವೇಶ ಮೊದಲಾದ ಚೇಷ್ಟೆಗಳಲ್ಲಿ ಇದನ್ನು ಬ್ರಾಹ್ಮೀಸ್ವರಸ ಮತ್ತು ಬಜೆ ಚೂರ್ಣ ಸೇರಿಸಿ ಸ್ವಲ್ಪ ಜೇನು ಮಿಶ್ರಮಾಡಿ ಕೊಡಬೇಕು. ದಿನಕ್ಕೆ 3 ವೇಳೆ.

**110. ಜವೆಗೋಧಿ** (ಬಾರ್ಲಿ)—ಬಾರ್ಲಿಯು ಗುರುವೂ, ಒಗರೂ, ಮಧುರವೂ, ವಿಪಾಕದಲ್ಲಿ ಕಟುವೂ ಆಗಿದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ; ಇದು ಲೇಖನವೂ; ರೂಕ್ಷವೂ, ಅಗ್ನಿವರ್ಧಕವೂ, ಮೇದಾಕರವೂ, ಸ್ವಲ್ಪ ಮಟ್ಟಿಗೆ ಅಭಿಷ್ಯಂದಿಯೂ, ಕಂಠಸ್ವರವನ್ನು ಸುಧಾರಿಸುವಂತಹದೂ, ಬಲಕಾರವೂ ಮತ್ತು ಕಾಂತಿದಾಯಕವೂ ಆಗಿರುತ್ತದೆ. ಇದರಿಂದ ಕಫ, ಮೇಧ, ಪಿತ್ತ, ಪೀನಸ, ಶ್ವಾಸ, ಕಾಸ, ಊರುಸ್ತಂಭ, ತೃಷಾ, ರಕ್ತವಿಕಾರ, ಕಂಠರೋಗ ಮತ್ತು ಚರ್ಮ ರೋಗಗಳು ಕೂಡ ನಿವಾರಣೆಯಾಗುತ್ತವೆ, ಉಷ್ಣ ಮತ್ತು ಸ್ಥೂಲ ಪ್ರಕೃತಿಯವರಿಗೆ ಇದು ಉತ್ತಮ ಆಹಾರವಾಗಿದೆ;

**111. ಜಾಯಿಕಾಯಿ**—ಜಾಯಿಕಾಯಿಯು ಗಾತ್ರದಲ್ಲಿ ದೊಡ್ಡದಾಗಿ, ತೂಕದಲ್ಲಿ ಭಾರವಾಗಿ ಇದ್ದಷ್ಟೂ ಹೆಚ್ಚಿನ ಪರಿಣಾಮಕಾರಿಯಾಗುತ್ತದೆ.

ಇದು ಲಘುವೂ, ಸ್ನಿಗ್ಧವೂ, ತೀಕ್ಷ್ಣವೂ, ಕಹಿಯೂ, ಒಗರೂ ಉಳ್ಳದ್ದಾಗಿ ವಿಪಾಕದಲ್ಲಿ ಕಟುವಾಗಿಯೂ, ಉಷ್ಣವೀರ್ಯವುಳ್ಳದ್ದಾಗಿಯೂ ಇರುತ್ತದೆ, ಅಲ್ಲದ ಇದು ಕಫವಾತ ಶಾಮಕವೂ, ರೋಚಕವೂ, ದೀಪಕವೂ, ಗ್ರಾಹಿಯೂ; ದುರ್ಗಂಧ ನಾಶಕವೂ ಆಗಿರುತ್ತದೆ. ಇದನ್ನು ಅಡಿಗೆಯಲ್ಲಿ ಮಸಾಲೆ ಪದಾರ್ಥವಾಗಿ ಉಪ ಯೋಗಿಸುವ ಕ್ರಮವಿದೆ. ಇದರಿಂದ ಯಕೃತ್ತಿನ ವಿಕಾರ, ಅನಿದ್ರೆ, ಅಜೀರ್ಣ, ಅತಿಸಾರ, ಕಾಲರಾ, ಹೃದ್ರೋಗ, ಪೀನಸ, ಕೆಮ್ಮು, ಶ್ವಾಸ, ಸಂಗ್ರಹಣಿ, ಕ್ರಿಮಿ, ಶೂಲೆ, ಬಿಕ್ಕಳಿಕೆ ಮತ್ತು ವಾತವಿಕಾರಗಳು ಪರಿಹಾರವಾಗುತ್ತವೆ. ಇದರಲ್ಲಿ ಬುದ್ಧಿ, ಮನಸ್ಸುಗಳನ್ನು ಸಾಂತ್ವನಗೊಳಿಸುವ ಶಕ್ತಿ ಇದೆ; ಸ್ವಲ್ಪಮಟ್ಟಿಗೆ ಅಮಲು ಬರಿಸುತ್ತದೆ; ಆದರೂ ದೀರ್ಘ ಸೇವನೆಯು ನರಗಳನ್ನು ದುರ್ಬಲಗೊಳಿಸುತ್ತದೆ. ಇದನ್ನು ಚೂರ್ಣರೂಪದಲ್ಲಿ ಕೊಡುವ ಕ್ರಮವಿದೆ. ಜೇನು, ನೀರು, ಶುಂಠಿಗಳನ್ನು ಸಾಮಾನ್ಯ ಅನುಪಾನವಾಗಿ ಹೇಳಿದೆಯಾದರೂ ರೋಗಕ್ಕೆ ತಕ್ಕ ಅನುಪಾನಗಳನ್ನು ಚಿಕಿತ್ಸೆಯಲ್ಲಿ ಅಳವಡಿಸಿಕೊಳ್ಳಬೇಕು. ಪ್ರಮಾಣ 3 ಗುಂಜಿಯಿಂದ 5 ಗುಂಜಿಯ ವರೆಗೆ ಹೇಳಿದ್ದರೂ ವ್ಯಾಧಿಯ ಮತ್ತು ರೋಗಿಯ ಬಲಾಬಲಗಳ ಮೇಲೆ ಅಳವಡಿಸಿ ಕೊಳ್ಳಬೇಕು; ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸಿದಲ್ಲಿ ಅಮಲು ಬರುತ್ತದೆ.

**112. ಜಾಯಿಪತ್ರೆ**—ಇದು ಲಘುವೂ ಒಗರೂ, ಕಹಿಯೂ, ಸುಗಂಧಿ ತವೂ, ಸ್ವಾದಿಷ್ಟವೂ, ರುಚಿಕರವೂ, ದೀಪನವೂ, ಪಾಚಕವೂ, ಕಾಸಶ್ವಾಸ ಪರಿ ಹಾರಕವೂ ಆಗಿದ್ದು ಕ್ಷಯ, ಅಜೀರ್ಣ, ಹೃದ್ರೋಗ, ವಿಷೂಚಿಕಾ ಮೊದಲಾದ ರೋಗಗಳನ್ನು ಪರಿಹರಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಇದು ವಾಸನೆ ಯಲ್ಲಿಯೂ, ಗುಣಗಳಲ್ಲಿಯೂ ಬಹುತೇಕ ಜಾಕಾಯಿಯ ಗುಣಧರ್ಮಗಳನ್ನೇ ಹೋಲುತ್ತದೆ. ಇದರ ಅನುಪಾನವೂ ಮತ್ತು ಪ್ರಮಾಣವೂ ಕೂಡ ಜಾಯಿಕಾಯಿ ಯಂತೆಯೇ ಎಂದು ನಿರ್ಧರಿಸಲಾಗಿದೆ; ಇವೆರಡಕ್ಕೂ ವಾಜೀಕರಣ ಶಕ್ತಿಯಿದೆ. ವೀರ್ಯವರ್ಧಕವಾದ ಇವು ಸೌಂದರ್ಯವರ್ಧಕವೂ ಆಗಿವೆ. ಇವೆರಡನ್ನೂ ಹೊಟ್ಟೆ ಯೊಳಗೆ ಮತ್ತು ಹೊರಗಿನ ಲೇಪನಕ್ಕೆ ಕೂಡ ಉಪಯೋಗಿಸುವ ರೂಢಿಯಿದೆ. ಇವು ಶರೀರದ ದುರ್ಗಂಧವನ್ನು ಹೋಗಲಾಡಿಸುತ್ತವೆ.

**113. ಜಾಪಾಳ**—ಜಾಪಾಳದ ಬೀಜವು ಗುರು, ಸ್ನಿಗ್ಧ, ತೀಕ್ಷ್ಣ, ಕಟು, ವಿಪಾಕದಲ್ಲಿಯೂ ಕಟು; ಇದು ಉಷ್ಣವೀರ್ಯವಿದ್ದು-ಕಫವಾತಹರ,ದೀಪನ, ವಿರೇಚನ (ಇದರಿಂದ ಆಮಾಶಯದಲ್ಲಿ ಕ್ಷೋಭೆಯೂ,ಕರುಳಿನಲ್ಲಿ ಮುರಿತವೂ ಉಂಟಾಗಿಶೋಥ ಯುಕ್ತವಾದ ನೀರಿನಂತಹ ಭೇದಿಯುಂಟಾಗುತ್ತದೆ(, ವಾಮಕ, ಲೇಖನ, ವಿದಾಹೀ ಮತ್ತು ಸ್ನೋಟಕನನಗುಣಯುಕ್ತವಾಗಿರುತ್ತದೆ; ಇದನ್ನು ಅಗ್ನಿಮಾಂದ್ಯ,ಸರ್ವಾಂಗ

ಶೋಥ, ಜೀರ್ಣನಿಬಂಧ, ಜಲೋದರ, ಜ್ವರ, ಉದರರೋಗ, ಕ್ರಿಮಿ ಮತ್ತು ಮಸ್ತಿಷ್ಕಗಳ ರಕ್ತಸ್ರಾವ, ಸಂನ್ಯಾಸ ಮೊದಲಾದ ವ್ಯಾಧಿಗಳಲ್ಲಿ ವಿರೇಚನಕ್ಕಾಗಿ ಕೊಡಲಾಗುತ್ತದೆ. ಇದರ ಬೇರು, ಎಲೆ, ಬೀಜ, ತೊಗಟೆ, ಹೀಗೆ ಪ್ರತಿಯೊಂದರಲ್ಲಿ ವಿರೇಚನ ಗುಣವಿದೆ, ಆದುದರಿಂದ ಇದರ ಪ್ರಯೋಗ ಮಾಡುವಾಗ ಅತಿ ಚಿಕ್ಕ ಪ್ರಮಾಣದಲ್ಲಿ ಕೊಡಬೇಕು. ಅಲ್ಲವಾದರೆ ಇದು ಅತಿ ಕೇಡನ್ನುಂಟುಮಾಡುತ್ತದೆ. ಆದುದರಿಂದಲೇ ಆಯುರ್ವೇದದಲ್ಲಿ ಇದನ್ನು ಉಪವಿಷವೆಂದೇ ಗಣನೆಯಲ್ಲಿ ತರಲಾಗಿದೆ; ಆದುದರಿಂದ ಇದನ್ನು ಪರಿಪೂರ್ಣವಾಗಿ ಶುದ್ಧೀಕರಿಸದೆ ಉಪಯೋಗಿಸಲೇ ಕೂಡದು. ಹಾಗೊಂದೊಮ್ಮೆ ಶುದ್ಧೀಕರಿಸದೆ ಕೊಟ್ಟರೆ ಗಂಟಲಿನಲ್ಲೂ, ಹೊಟ್ಟೆ ಮತ್ತು ಕರಳುಗಳಲ್ಲೂ ಅತಿ ತೀವ್ರವಾದ ಜ್ವಾಲೆಯುಂಟಾಗಿ, ತಡೆಯಲಾರದ ಭೇದಿಯುಂಟಾಗುವುದಲ್ಲದೇ ಇದು ಶರೀರವನ್ನು ನಿರ್ಬಲಗೊಳಿಸಿ, ತಣ್ಣಗೆಮಾಡಿಕೊನೆಗೆ ಮೃತ್ಯುವನ್ನೂ ತರುತ್ತದೆ; ಆದುದರಿಂದ ಜಾಪಾಳದ ಶುದ್ಧಿಯ ವಿಷಯದಲ್ಲಿ ಬಹು ಎಚ್ಚರಿಕೆಯನ್ನು ವಹಿಸಬೇಕೆಂದು ಒತ್ತಿಯೊತ್ತಿ ಹೇಳುತ್ತೇನೆ.

**114. ಜಾಜಿ**—ಇದರ ಬೇರು, ಎಲೆ, ಹೂವು ಈ ಮೂರನ್ನೂ ಔಷಧ ದ್ರವ್ಯಗಳಾಗಿ ಉಪಯೋಗಿಸುವ ಕ್ರಮವಿದೆ. ಇದರಲ್ಲಿ ಬಿಳಿಯದು ಮತ್ತು ಕೆಂಪುಗಳೆಂಬ ಎರಡು ಜಾತಿಗಳಿದ್ದರೂ ಎರಡರ ಗುಣಧರ್ಮಗಳೂ ಒಂದೇ ಆಗಿದೆ. ಇದು ಉಷ್ಣವೀರ್ಯವುಳ್ಳದ್ದಾಗಿ ಲಘುವೂ, ಸ್ನಿಗ್ಧವೂ, ಮಧುರವೂ, ಒಗರು ರಸವುಳ್ಳದ್ದಾಗಿದ್ದರೂ ವಿಪಾಕದಲ್ಲಿ ಕಹಿಯಾಗಿರುತ್ತದೆ. ಅಲ್ಲದೆ ಇದು ರಕ್ತಪ್ರಸಾದನವೂ, ಮೂತ್ರಲವೂ, ತ್ರಿದೋಷಶಾಮಕವೂ, ವಾಜೀಕರಣವೂ, ಆಗಿದ್ದು ಕುಷ್ಠ, ಕಂಟೂ, ರಕ್ತವಿಕಾರ, ಮೂತ್ರಕೃಚ್ಛ್ರ, ನಪುಂಸಕತೆಗಳನ್ನು ನಿವಾರಿಸುತ್ತದೆ; ಇದರ ಎಲೆಯ ರಸವನ್ನು ಸ್ವರಸವಾಗಿಯೂ, ಬೇರನ್ನು ಮತ್ತು ಹೂವನ್ನು ಚೂರ್ಣರೂಪವಾಗಿಯೂ ಉಪಯೋಗಿಸುವ ರೂಢಿಯಿದೆ. ರೋಗೋಕ್ತಅನುಪಾನದಲ್ಲಿ ಚೂರ್ಣವನ್ನು 1 ರಿಂದ 2 ತೊಲೆಯವರೆಗೂ, ಸ್ವರಸವನ್ನು 2 ರಿಂದ 3 ತೊಲೆಯವರೆಗೂ ಕೊಡಬೇಕು.

**115. ಜಾಲಿ**—ಇದು ರೂಕ್ಷವೂ, ಸ್ತಂಭಕವೂ, ಗುರುವೂ, ಕಷಾಯವೂ, ಮಧುರವೂ, ಶೀತವೂ, ಲೇಖನವೂ, ಆಗಿದ್ದು ಕಫಪಿತ್ತಗಳನ್ನು ನಿವಾರಿಸುತ್ತದೆ. ಅಲ್ಲದೆ ಇದು ಗ್ರಾಹಿಯೂ ಆಗಿದ್ದು ಪಿತ್ತವನ್ನು ನಿವಾರಿಸಿ ಅಗ್ನಿಯನ್ನು ಹೆಚ್ಚಿಸುತ್ತದೆ. ಜಾಲಿಯಲ್ಲಿ ರಕ್ತಾತಿಸಾರ; ಪಿತ್ತ, ಪ್ರಮೇಹ, ಪ್ರದರಗಳನ್ನು ಪರಿಹರಿಸತಕ್ಕ ಶಕ್ತಿ ಇದೆಯಲ್ಲದೆ ಮುರಿದ ಮೂಳೆಯನ್ನು ಕೂಡಿಸುವ, ಶೋಣಿತ ಸ್ರಾವವನ್ನು ಗುಣಪಡಿಸುವ ಶಕ್ತಿಯೂ ಇದೆ. ಇದರ ಎಳೆಯ ಚಿಗುರೆಲೆಯಲ್ಲಿ ಅತಿಸಾರವನ್ನು ಹೋಗಲಾಡಿಸುವ ಗುಣವಿದೆ. ಉಪದಂಶವನ್ನು ಗುಣಪಡಿಸುವ ಸಾಮರ್ಥ್ಯವಿದೆ; ಕಾಯಿಯಲ್ಲಿ ವಾಜೀಕರಣ ಗುಣವಿದೆ; ಇದು ಧಾತುವಿಕಾರಗಳನ್ನು

ಹೋಗಲಾಡಿಸಿ ವೀರ್ಯವೃದ್ಧಿಯನ್ನುಂಟುಮಾಡುತ್ತದೆ. ನೇತ್ರ ದೋಷವನ್ನು ಪರಿಹರಿಸುತ್ತದೆ. ಇದರ ತೊಗಟೆಯ ಕಷಾಯದ ಸೇವನೆಯಿಂದ ಮೂಳೆಯು ದೃಢಗೊಳ್ಳುತ್ತವೆ; ಹಲ್ಲುಗಳು ಗಟ್ಟಿಯಾಗುತ್ತವೆ. ಮತ್ತು ಜಲೋದರವು ನಿವಾರಣೆಯಾಗುತ್ತದೆ.

**116. ಜೀರಿಗೆ**—ಇದು ದೀಪನ, ಪಾಚನ, ಕೋಷ್ಠವಾತಪ್ರಶಮನ, ಮೂತ್ರಜನನ, ವೇದನಾಸ್ಥಾಪನ ಮತ್ತು ದಾಹ ಪ್ರಶಮನವಾಗಿದೆ. ವಾಂತಿ, ಭೇದಿ ಸಂಗ್ರಹಣಿ, ಉದರ ಬಾಧೆಗಳು ನಿವಾರಣೆಯಾಗುತ್ತವೆ. ಪ್ರಮೇಹ, ಮೂತ್ರವಿಕಾರ ಪಿತ್ತವಿಕಾರಗಳು ಪರಿಹಾರವಾಗುತ್ತವೆ. ಚರ್ಮರೋಗಗಳು ಗುಣಹೊಂದುತ್ತವೆ. ಜೀರಿಗೆಯನ್ನು ಚೂರ್ಣ ಮತ್ತು ಕಷಾಯರೂಪದಲ್ಲಿ ಕೊಡುವ ಕ್ರಮವಿರುತ್ತದೆ. ಹೊತ್ತಿಗೆ 5 ಗುಂಜಿಯಿಂದ 15 ಗುಂಜಿಯವರೆಗೆ ಸಕ್ಕರೆಯ ಅನುಪಾನದಲ್ಲಿ ಕೊಡಲು ಹೇಳಿದೆ. ಹೊರಗೆ ಲೇಪನಕ್ಕೆ ಹಾಲಿನಲ್ಲರೆದು ಹಚ್ಚಬೇಕು.

**117. ಜೋಳ**–ರಾಗಿಯಂತೆಯೇ ಜೋಳದ ಸಂಬಂಧವಾಗಿಯೂ ಆರ್ಷೇಯ ಆಯುರ್ವೇದ ಗ್ರಂಥಗಳಲ್ಲಿ ಹೆಚ್ಚಿನ ವಿಮರ್ಶೆ ಕಂಡುಬರುವುದಿಲ್ಲ. ಆದರೂ ದೀರ್ಘ ಕಾಲದ ಹಿರಿಯರ ಅನುಭವದಂತೆ ಅದು ಜಡ, ಸ್ನಿಗ್ಧ, ಒಗರು ಮತ್ತು ಮಧುರ ರಸವುಳ್ಳದ್ದಾಗಿರುತ್ತದೆಂದು ನಿರ್ಧರಿಸಲಾಗಿದೆ. ಇದು ಅರ್ಶಘ್ನವೂ, ವ್ರಣಘ್ನವೂ, ಬಲ್ಯವೂ, ಪಿತ್ತ ಮತ್ತು ಕಫಗಳ ಶಾಮಕವೂ ಆಗಿರುತ್ತದೆ. ಆದರೆ ವಾಯುಪ್ರಕೋಪ ವನ್ನುಂಟುಮಾಡುವ ಶಕ್ತಿ ಜೋಳಕ್ಕಿದೆ. ಜೋಳದಲ್ಲಿ ಅನೇಕ ಜಾತಿಗಳುಂಟು ಆದರೆ ಗುಣಧರ್ಮದಲ್ಲೂ ಮತ್ತು ರಾಸಾಯನಿಕ ಸಂಘಟನೆಯಲ್ಲೂ ಎಲ್ಲವೂಒಂದೇ ಎಂದೇ ಹೇಳಬಹುದು. ಇವುಗಳಲ್ಲೆಲ್ಲ ಬಿಳಿಯ ಜೋಳವೇ ಅತಿ ಶ್ರೇಷ್ಠವೆಂದು ಹೇಳಲಾಗಿದೆ

**118. ತಂಗಡಿಗಿಡ**—ಇದು ಲಘುವೂ, ರೂಕ್ಷವೂ, ಕಷಾಯವೂ ತಿಕ್ತವೂ, ಕಟುವಿಪಾಕವೂ, ಶೀತವೀರ್ಯವೂ, ಕಫಪಿತ್ತಶಾಮಕವೂ ಪ್ರಬಲಸ್ತಂಭಕವೂ, ಚಕ್ಷುಷ್ಯವೂ, ಮೂತ್ರಸಂಗ್ರಹಣೀಯವೂ ಆಗಿದೆ. ಅಲ್ಲದೆ ಇದು ಕ್ರಿಮಿಘ್ನವಾಗಿದ್ದು, ಅತಿಸಾರ, ಪ್ರವಾಹಿಕಾ, ರಕ್ತಸ್ರಾವ, ಶ್ವಾಸ, ವಾತವಿಕಾರ, ಚರ್ಮರೋಗ, ಮುಖರೋಗ, ಶೂಲ, ಶೋಥ ಮತ್ತು ವ್ರಣರೋಗಗಳ ಮೇಲೆ ಬಹಳ ಪ್ರಯೋಜನಕಾರಿಯಾಗಿದೆ. ಇದರ ತೊಗಟೆಯು ಧಾತುವರ್ಧಕವೂ, ಪೌಷ್ಟಿಕವೂ ಮತ್ತು ಸಂಕೋಚವೂ ಆಗಿದೆ; ಮತ್ತು ಇದರ ಬೇರು ಗುರುವೂ ಮಧುರವೂ, ವಿಷನಾಶಕವೂ, ಪೌಷ್ಟಿಕವೂ, ವಾತಕಾರಕವೂ, ಶ್ವಾಸ, ವಾತವಿಕಾರ ತೃಷಾ ಮತ್ತು ಪ್ರಮೇಹಗಳಲ್ಲಿ ಬಹು ಉಪಯುಕ್ತವೂ, ಆಗಿದೆ. ಹಾಗೆಯೇ ಪುಷ್ಪವು ಶುಕ್ರಸ್ತಂಭಕವೂ, ಪ್ರಮೇಹ, ಮಧುಮೇಹ, ಪ್ರದರ, ಗಂಟಲು ನೋವು-ಗಳಲ್ಲಿ ಪ್ರಯೋಜನಕಾರಿಯೂ ಆಗಿದೆ. ರಕ್ತಮಂಡಲ ಮತ್ತು ಉರಿಮಂಡಲದ ಹಾವುಗಳ ಕಡಿತದ ಮೇಲೆ ಇದು ಸತ್ಪರಿಣಾಮವನ್ನುಂಟುಮಾಡುತ್ತದೆ.

119. **ತಾರೇಕಾಯಿ**—ಈ ಮರದ ಒಣಗಿದ ಕಾಯಿಯೇ ಔಷಧ ದ್ರವ್ಯವಾಗಿದೆ; ಇದೇ ತಾರೇಕಾಯಿ, ತಾರೇಕಾಯಿಯ ಸಿಪ್ಪೆಯನ್ನು ಚೂರ್ಣ, ಕಷಾಯ, ಕ್ವಾಥಗಳ ರೂಪದಲ್ಲಿ ಉಪಯೋಗಿಸುವ ರೂಢಿ ಇದೆ. ಇದು ಕಫನಾಶಕವಾಗಿದ್ದು ದೀಪನವೂ, ಪಾಚನವೂ, ಆಗಿದೆ; ಇದರ ಬೀಜವು ಶೋಥಹರ, ಇದನ್ನು ತೆಯ್ದು ಜ್ವರ, ಮೂಲವ್ಯಾಧಿ, ಅತಿಸಾರ, ಅಜೀರ್ಣ, ಕುಷ್ಠ, ಜಲೋದರ ಮೊದಲಾದ ವ್ಯಾಧಿಗಳನ್ನು ಪರಿಹರಿಸುತ್ತದೆ; ಚೆನ್ನಾಗಿ ಒಲಿತ ಕಾಯಿಯಲ್ಲಿ ಮಾತ್ರ ಮೇಲಿನ ರೋಗ ನಿವಾರಕ ಗುಣವಿದೆ; ಆದರೆ ಅರೆಮಾಗಿದ ಕಾಯಿಯು ವಿರೇಚನವನ್ನುಂಟು ಮಾಡುತ್ತದೆ; ತಾರೆಕಾಯಿಯಲ್ಲಿ ಮೆದುಳನ್ನು ಬಲಗೊಳಿಸುವ ಶಕ್ತಿ ಇದ್ದು ಕಣ್ಣಿಗೂ ಶಾಮಕವಾಗಿದೆ. ತಾರೇಕಾಯಿಯ ಚೂರ್ಣ ಹೊತ್ತಿಗೆ 12 ರಿಂದ 36 ಗುಂಜಿಯವರೆಗೆ ದಿನಕ್ಕೆ 2-3 ವೇಳೆ ಕೊಡಬೇಕೆಂಬ ನಿಯಮವಿದೆ.

120. **ತಾಳೀಮರ**—ಇದು ಗುರುವೂ, ಸ್ನಿಗ್ಧವೂ, ಮಧುರವೂ, ವಿಪಾಕದಲ್ಲೂ ಮಧುರವೂ,ಶೀತವೀರ್ಯವುಳ್ಳದ್ದೂ ಆಗಿದ್ದು ವಾತಪಿತ್ತಶಾಮಕವೂ ದಾಹ ಪ್ರಶಮನವೂ ಬಲ್ಯವೂ ಬ್ರುಂಹಣವೂ, ಜ್ವರಘ್ನವೂ, ತೃಗ್ದೋಷಹರವೂ, ರಕ್ತಶೋಧಕವೂ ಆಗಿರುತ್ತದೆ. ಇದರ ರಸವನ್ನು ನಾಯಿಕೆಮ್ಮಿನಲ್ಲಿ ಕೊಡುತ್ತಾರೆ. ಕೋಮಲವಾದ ಎಳೆಬೇರಿನ ರಸವು ಹಿಕ್ಕಾಶ್ವಾಸವನ್ನು (ಬಿಕ್ಕಳಿಕೆ) ಪರಿಹರಿಸುತ್ತದೆ. ಇದರ ಫಲವೂ, ಮಧುರವೂ, ಸ್ನೇಹನವೂ, ಪೌಷ್ಟಿಕವೂ ಆಗಿದ್ದು ಮದಕಾರಕವೂ, ಮಜ್ಜಾವರ್ಧಕವೂ, ಕಾಮೋದ್ದೀಪಕವೂ, ಕ್ರಿಮಿನಾಶಕವೂ, ತೃಗ್ದೋಷಹರವೂ, ಮತ್ತು ಪಿತ್ತ, ದಾಹ, ತೃಷಾ, ದಣಿವು, ವಾತರೋಗ ರಕ್ತವಿಕಾರ, ಮೂತ್ರದಾಹಗಳ ನಾಶಕವೂ, ಆಗಿದ್ದು ಅಧಿಕ ಸೇವನೆಯು ವಿಷ್ಟಂಭಿಯಾಗಿರುತ್ತದೆ.

121. **ತಾಲೀಸಪತ್ರಿ**—ಇದು ಗುಣದಲ್ಲಿ ಲಘುವೂ, ತೀಕ್ಷ್ಣವೂ ವಿಪಾಕದಲ್ಲಿ ಮಧುರವೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಮತ್ತು ಕಫವಾತಶಾಮಕವೂ ರೋಚನವೂ, ಸಂಕೋಚವೂ, ದೀಪನವೂ, ವಾತಾನುಲೋಮಕವೂ; ವೇದನಾಸ್ಥಾಪನವೂ, ಶ್ಲೇಷ್ಮಶ್ವಾಸಹರವೂ, ಮೂತ್ರಲವೂ, ಜ್ವರಘ್ನವೂ ಮತ್ತು ಬಲ್ಯವೂ ಕೂಡ ಆಗಿರುತ್ತದೆ. ಇದು ಅರುಚಿ, ಅಗ್ನಿಮಾಂದ್ಯ ಆಧ್ಮಾನ ಗುಲ್ಮ, ಕಾಸ, ಶ್ವಾಸ, ಹಿಕ್ಕಾ, ವಮನ, ಸ್ವರಭೇದ, ರಕ್ತಪಿತ್ತ ಅಪಸ್ಮಾರ, ರಾಜಯಕ್ಷ್ಮ, ಮೂತ್ರಕೃಚ್ಛ್ರ, ಮೂತ್ರಾವರೋಧ. ಶೋಥ ವಾತಶ್ಲೇಷ್ಮಜ್ವರ, ಮೊದಲಾದ ವ್ಯಾಧಿಗಳ ಮೇಲೆ ಒಳ್ಳೆಯ ಪರಿಣಾಮವನ್ನುಂಟು ಮಾಡುತ್ತದೆ. ಇದು ಸ್ವರಭಂಗ ಮತ್ತು ಎಲ್ಲಾ ಬಗೆಯ ಕಂಠರೋಗಗಳ

ಮೇಲೂ ಕೆಲಸ ಮಾಡುತ್ತದೆ. ಇದನ್ನು 6 ರಿಂದ 12 ಗುಂಜಿಯವರೆಗೂ ಜೇನು, ತುಪ್ಪ ಅಥವಾ ರೋಗೋಕ್ತ ಅನುಪಾನಗಳಲ್ಲಿ ಕೊಡುವ ಕ್ರಮವಿದೆ.

**122. ತುಲಸಿ**—ಇದು ಲಘುವೂ, ರೂಕ್ಷವೂ, ಕಹಿಯೂ, ವಿಪಾಕದಲ್ಲಿ ಕಟುವೂ, ಮತ್ತು ಉಷ್ಣವೀರ್ಯವುಳ್ಳದ್ದೂ ಆಗಿರುತ್ತದೆ. ಇದರಲ್ಲಿ ಬಿಳಿಯ (ಶ್ರೀತುಲಸಿ) ಮತ್ತು ಕರಿಯ (ಕೃಷ್ಣತುಲಸಿ) ತುಲಸಿಗಳೆಂಬ ಭೇದವಿದ್ದು ಬಹುತೇಕ ಈ ಎರಡರ ಗುಣಧರ್ಮಗಳೂ ಒಂದೇ ಆಗಿರುತ್ತದೆ. ಬಿಳಿಯ ತುಲಸಿಯು ಉಷ್ಣ ಕಾರಕವೂ, ಸ್ವೇದಜನನವೂ, ಪಾಚಕವೂ ಆಗಿರುತ್ತದೆ. ಇದು ಬಾಲಕರ ನಿತ್ಯದ ನೆಗಡಿ (ಪ್ರತಿಶ್ಯಾಯ) ಮತ್ತು ಕಫವಿಕಾರಗಳ ಮೇಲೆ ಒಳ್ಳೆಯ ಪರಿಣಾಮಕಾರಿಯಾಗಿರುತ್ತದೆ. ಆದರೂ ಕೃಷ್ಣತುಲಸಿಯು ಅಧಿಕ ಪ್ರಭಾವಶಾಲಿಯಾಗಿದ್ದು ಶೀತವೂ, ಸ್ನಿಗ್ಧವೂ, ಕಫನಿಸ್ಸಾರಕವೂ, ಜ್ವರಘ್ನವೂ ಆಗಿರುತ್ತದೆ. ಇದು ಪುಪ್ಪುಸದೊಳಗಿನ ಕಫವನ್ನು ನಿವಾರಿಸುವುದರಲ್ಲಿ ಹೆಚ್ಚಿನ ಪ್ರಯೋಜನಕಾರಿಯಾಗಿರುತ್ತದೆ. ಇದರ ಒಣಗಿದ ಎಲೆಯ ಚೂರ್ಣವು ಪೀನಸವನ್ನು ಪರಿಹರಿಸುವುದಲ್ಲದೇ ಕಫಘ್ನವೂ, ಆಗಿರುತ್ತದೆ. ತುಲಸಿಯ ಎಲೆ 25 ನ್ನು ಪ್ರತಿದಿನ ನುಣ್ಣಗೆ ಅರೆದು, ಚೆನ್ನಾಗಿ ಕಡೆದು ಬೆಣ್ಣೆ ತೆಗೆದ ಮಜ್ಜಿಗೆಯಲ್ಲಿ ಮಿಶ್ರಮಾಡಿ ಕೊಡುವುದರಿಂದ ಕ್ಯಾನ್ಸರ್ (ಮಾಂಸಾರ್ಬುದ) ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ತುಲಸಿಯ ಎಲೆ, ಹೂ, ಬೀಜ, ಬೇರು, ಕಾಂಡ, ತೊಗಟೆಗಳೆಲ್ಲವೂ ಔಷಧದಲ್ಲಿ ಉಪಯೋಗಿಸಲ್ಪಡುತ್ತದೆ. ಪ್ರಮಾಣ—ಒಣಗಿದ ಎಲೆ, ಬೇರು ಅಥವಾ ತೊಗಟೆಯ ಚೂರ್ಣವಾದರೆ 6 ರಿಂದ 12 ಗುಂಜಿ; ಹಸಿಯ ಎಲೆ 12 ರಿಂದ 25 ದಲ; ಸ್ವರಸ–ಕಾಲರಿಂದ ಅರ್ಧ ತೊಲ; ಮತ್ತು ಕಷಾಯ ಅಥವಾ ಕ್ವಾಥವಾದರೆ 2 ರಿಂದ 3 ತೊಲ. ತುಲಸಿಯಲ್ಲೇ ನಾಯಿ ತುಲಸಿ ಎಂಬುದೊಂದು ಜಾತಿ ಕೂಡ ಉಂಟು; ಇದನ್ನು ಕಾಡು ತುಲಸಿ ಎಂದು ಕರೆಯುವ ಪರಿಪಾಠವೂ ಇದೆ; ಇದರ ವಾಸನೆಯು ಶ್ರೀತುಲಸಿ ಮತ್ತು ಕೃಷ್ಣತುಲಸಿಗಿಂತಲೂ ತೀಕ್ಷ್ಣವಾಗಿರುತ್ತದೆ. ಇದು ಕಫಘ್ನವೂ ಜ್ವರಘ್ನವೂ ಮತ್ತು ಕ್ರಿಮಿಘ್ನವೂ ಆಗಿರುತ್ತದೆ. ಮನೆಯ ಒಳಗೆ ಮತ್ತು ಸುತ್ತಮುತ್ತ ಸೊಳ್ಳೆಗಳ ನಿವಾರಣಾರ್ಥವಾಗಿ ನಾಯಿ ತುಲಸಿಯ ಗಿಡದ ಹೊಗೆಯನ್ನು ಹಾಕುವ ರೂಢಿಯುಂಟು; ಕಾರ್ತಿಕ ಮಾಸದಲ್ಲಿ ತುಲಸಿಯ ಸೇವನೆಯು ನಿಷೇಧಿಸಲ್ಪಟ್ಟಿದೆ; ಅಲ್ಲದೆ ತಾಂಬೂಲದ ಜೊತೆಯಲ್ಲೂ ತುಲಸಿಯ ಸೇವನೆಯು ವರ್ಜ್ಯ. ತುಲಸಿಯನ್ನು ಸೇರಿಸಿ ಹಾಲು ಕುಡಿಯಬಾರದಾಗಿ ಹೇಳಿದೆ. ಹೀಗೆ ಮಾಡುವುದರಿಂದ ಚರ್ಮವ್ಯಾಧಿಯೂ ಕುಷ್ಠವೂ ಬರುವ ಭಯವಿದೆ.

**123. ತೊಗರಿ**—ಇದು ಲಘುವೂ, ಒಗರೂ, ರೂಕ್ಷವೂ, ಮಧುರವೂ

ಮತ್ತು ಶೀತವೀರ್ಯವುಳ್ಳದ್ದೂ ಆಗಿದ್ದು ವಿಷ್ಟಂಭಿಯಾಗಿರುತ್ತದೆ; ಅಲ್ಲದೆ ಇದರಿಂದ ಶ್ಲೇಷ್ಮ, ರಕ್ತ ಮತ್ತು ಪಿತ್ತಗಳ ವಿಕಾರಗಳು ನಿವಾರಣೆಯಾಗುತ್ತವೆ. ಆದರೆ ಕಿಂಚಿತ್ ವಾತದಾಯಕವಾಗಿದೆ. ತೊಗರಿಯ ಎಲೆ, ಬೇರು, ಕಾಳು, ಹೊಟ್ಟು ಎಲ್ಲವೂ ಔಷಧ ದ್ರವ್ಯಗಳಾಗಿರುತ್ತವೆ. ಇವರಲ್ಲಿ ಕೆಂಪು ಮತ್ತು ಅರಿಸಿನ ಬಣ್ಣದ ಎರಡು ಜಾತಿಗಳುಂಟು. ಹೊರಗಿನ ಲೇಪನಕ್ಕೆ ಕೆಂಪೂ ಮತ್ತು ಹೊಟ್ಟೆಯೊಳಗೆ ಸೇವಿಸಲು ಅರಿಸಿನ ಬಣ್ಣದ್ದೂ ಶ್ರೇಷ್ಠವೆಂದು ಪರಿಗಣಿಸಲಾಗಿದೆ. ಇದು ಸ್ನಿಗ್ಧವೂ, ಕಾಂತಿದಾಯಕವೂ ಆಗಿರುವುದರಿಂದ ಚರ್ಮವ್ಯಾಧಿಗಳನ್ನು ಪರಿಹರಿಸಿ ಚರ್ಮಕ್ಕೆ ಮೃದುತ್ವವನ್ನು ಕೊಡುವ ಶಕ್ತಿಯು ಇದಕ್ಕಿದೆ; ಇದರ ಹೊಗೆಯನ್ನು ತೆಗೆದುಕೊಳ್ಳುವುದರಿಂದ ಬಿಕ್ಕಳಿಕೆ (ಹಿಕ್ಕಾಶ್ವಾಸ)ಯು ನಿವಾರಣೆಯಾಗುತ್ತದೆ. ಇದರ ಲೇಪನದಿಂದ (ಕೆಂಪುಬೇಳೆ–ಚನ್ನಂಗಿಬೇಳೆ) ಮುಖದ ಮೊಡವೆಗಳು ನಿವಾರಣೆಯಾಗಿ ಮುಖಕ್ಕೆ ಕಾಂತಿಯುಂಟಾಗುತ್ತದೆ.

**124. ತೆಂಗಿನಕಾಯಿ**—ಇದು ಗುರುವೂ, ಸ್ನಿಗ್ಧವೂ, ಮಧುರವೂ, ಶೀತವೀರ್ಯವೂ, ವಿಪಾಕದಲ್ಲಿ ಮಧುರವೂ, ವಾತಪಿತ್ತಶಾಮಕವೂ, ಅನುಲೋಮನವೂ, ಸಂಕೋಚಕವೂ, ಹೃದ್ಯವೂ, ಬಸ್ತಿಶೋಧಕವೂ, ಬಲ್ಯವೂ, ಪೌಷ್ಟಿಕವೂ, ಕಫಕಾರಕವೂ, ಶೂಲ ಪ್ರಶಮನವೂ ಮತ್ತು ಶೋಥ, ತೃಷಾ, ದಾಹ,ರಕ್ತದೋಷ, ಕ್ಷತಕ್ಷಯ, ಜ್ವರಾದಿಗಳ ನಿವಾರಕವೂ ಆಗಿದೆ. ತೆಂಗಿನ ಎಳನೀರಿನ (ಎಳೆಯಕಾಯಿ) ಜಲವು ದಾಹಶಾಮಕವೂ, ಕಾಂತಿದಾಯಕವೂ, ರೇಚಕವೂ, ಶೀತಲವೂ, ಅಗ್ನಿದೀಪಕವೂ, ರಕ್ತಶೋಧಕವೂ, ಹಿಕ್ಕಾನಿವಾರಕವೂ, ತೃಷ್ಣಾನಿಗ್ರಹಣವೂ, ಪೈತ್ತಿಕವಿಕಾರ, ಮೂತ್ರಕೃಚ್ಛ್ರ, ಮೂತ್ರಗತವರ್ಣವಿಕಾರ, ವಮನ, ಮೂರ್ಛೆ, ಪಿತ್ತಜ್ವರ,ವಿಷಮಜ್ವರ,ಮೊದಲಾದವುಗಳಲ್ಲಿ ಬಹಳ ಪ್ರಯೋಜನಕಾರಿಯೂ ಆಗಿದೆ. ತೆಂಗಿನ ಬೇರು, ಗರಿ, ಕಾಯಿ, ಎಳನೀರು,ಎಳೆಯಹೀಚು, ಹೊಂಬಾಳೆ,ಚಿಪ್ಪು, ಸಿಪ್ಪೆ ಹೀಗೆ ಪ್ರತಿಯೊಂದೂ ಔಷಧೋಪಯುಕ್ತದ್ರವ್ಯಗಳಾಗಿವೆಯಲ್ಲದೆ ಗೃಹೋಪಯುಕ್ತವಾದ ವಸ್ತುಗಳೂ ಆಗಿವೆ, ಆದುದರಿಂದಲೇ ಇವನ್ನು 'ಕಲ್ಪವೃಕ್ಷ'ಎಂದು ಕರೆದರು. ತೆಂಗಿನಮರ ಒಂದರ ವಿವಿಧ ಭಾಗಗಳ ಔಷದೋಪಯುಕ್ತತೆಯ ವಿಚಾರವಾಗಿ ಒಂದೊಂದು ಗ್ರಂಥವನ್ನೇ ಬರೆಯಬಹುದು; ಆದರೆ ಇಲ್ಲಿಲ್ಲ ಕೊಟ್ಟಿರುವುದು ಸೂಕ್ಷ್ಮಾತಿ ಸೂಕ್ಷ್ಮ ಪರಿಚಯಗಳನ್ನು ಮಾತ್ರವೆಂಬುದನ್ನು ಮರೆಯಬಾರದು.

**125. ತೊಂಡೆ**(ಸಿಹಿತೊಂಡೆ)-ಇದು ಮಧುರವೂ, ಶೀತಲವೂ, ಸ್ತಂಭನವೂ, ಲೇಖನವೂ, ಗುರುವೂ, ಸ್ತನ್ಯಜನನವೂ, ರಕ್ತಪಿತ್ತ ಮತ್ತು ದಾಹನಾಶಕವೂ ಆಗಿದೆ. ಇದನ್ನು ಅತ್ಯಧಿಕವಾಗಿ ತಿನ್ನುವುದರಿಂದ ಆಧ್ಮಾನವೂ ಮತ್ತು

ಮಲ, ಮೂತ್ರಾವರೋಧವೂ ಉಂಟಾಗುತ್ತದೆ; ಅಲ್ಲದೆ ಇದು ಬುದ್ಧಿ ಶಕ್ತಿಯಮೇಲೆ ದುಷ್ಪರಿಣಾಮವನ್ನುಂಟುಮಾಡುತ್ತದೆಂದು ತಿಳಿಯಲಾಗಿದೆ. ವಿಶೇಷವಾಗಿ ಇದನ್ನು ಮಕ್ಕಳಿಗೆ ಕೊಡುವುದು ಹೆಚ್ಚು ಸೂಕ್ತವಲ್ಲ. ತೊಂಡೆಯ ಎಲೆಯು ಮಲಾವರೋಧವೂ ವಾತಕಾರಕವೂ ಆಗಿದ್ದು ಕಫಪಿತ್ತಗಳನ್ನು ಪರಿಹರಿಸುತ್ತದೆ. ಇದರಬೇರು ಶೀತಲವೂ, ಪ್ರಮೇಹನಾಶಕವೂ, ಸ್ತಂಭಕವೂ, ಧಾತುವರ್ಧಕವೂ ಮತ್ತು ಕೈಕಾಲುಗಳ ಉರಿ, ದಾಹ, ವಾಂತಿ, ಭ್ರಾಂತಿಗಳನ್ನು ಪರಿಹರಿಸತಕ್ಕದ್ದೂ ಆಗಿರುತ್ತದೆ; ಇದರ ಕಾಯಿಯು ಕಂಡೂ, ಪಿತ್ತ ಮತ್ತು ಕಾಮಾಲೆಯನ್ನು ನಿವಾರಣೆಮಾಡುತ್ತದೆ. ತೊಂಡೆಯಲ್ಲಿ ಸಿಹಿತೊಂಡೆ ಮತ್ತು ಕಹಿತೊಂಡೆಗಳೆಂಬ ಎರಡು ಭೇದಗಳುಂಟು.

**126.—ತೊಂಡೆ(ಕಹಿತೊಂಡೆ)**ಇದರ ಕಾಯಿಯು ವಮನಕಾರಕವೂ ಮತ್ತು ಕಫನಾಶಕವೂ ಆಗಿರುತ್ತದೆ; ಹಣ್ಣು–ಶೀತಲವೂ, ರಸ ಮತ್ತು ಪಾಕದಲ್ಲಿ ಮಧುರವೂ ಮತ್ತು ಪಿತ್ತನಾಶಕವೂ ಕೂಡ ಆಗಿರುತ್ತದೆ. ಅಲ್ಲದೆ ಇದು ಲಘುವೂ, ರೂಕ್ಷವೂ, ತೀಕ್ಷ್ಣವೂ, ತಿಕ್ತವೂ, ಒಗರೂ, ವಿಪಾಕದಲ್ಲಿ ಕಹಿಯೂ ಆಗಿದ್ದು ಉಷ್ಣವೀರ್ಯಉಳ್ಳದ್ದೂ ಕಟುಪೌಷ್ಟಿಕವೂ, ರುಚಿಕಾರಕವೂ ವಾತಪ್ರಕೋಪಕವೂ, ದೀಪನವೂ, ಪಾಮಕವೂ, ರೇಚಕವೂ, ಯಕೃದುತ್ತೇಜಕವೂ, ರಕ್ತಶೋಧಕವೂ, ಶೋಥಹರವೂ, ಕಫಪಿತ್ತಹರವೂ,(ವಮನದ ಮೂಲಕವಾಗಿ ಕಫವನ್ನು, ವಿರೇಚನದ ಮೂಲಕವಾಗಿ ಪಿತ್ತವನ್ನೂ ಹೊರಕ್ಕೆ ಹಾಕುತ್ತದೆ), ಮೂಲ ಸಂಗ್ರಹಣೀಯವೂ, ಸ್ವೇದಜನಕವೂ, ಜ್ವರಘ್ನವೂ, ಕಾಮಲಾ, ರಕ್ತಪಿತ್ತ, ಶ್ವಾಸ, ಕಾಸ, ಶೋಥ, ಪಾಂಡು ಮತ್ತು ಮಧುಮೇಹ, ಬಹುಮೂತ್ರ, ಗ್ರಂಥಿಶೋಥ, ಮತ್ತು ಚರ್ಮರೋಗಗಳ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ಆದರಲ್ಲೂ ಈ ರಸದ 1 ತೊಲದಲ್ಲಿ ಸುವರ್ಣವಂಗೇಶ್ವರವನ್ನು 3–4 ಗುಂಜಿ ಸೇರಿಸಿ ಕೊಡುವುದರಿಂದ ಇದು ಇನ್ಸುಲಿನ್(Insulln)ನಂತೆ ಕೆಲಸಮಾಡುತ್ತದೆ. ಇದರ ಗೋಂದೂ ಇದೇ ಕೆಲಸವನ್ನು ಮಾಡುತ್ತದೆ. ಪ್ರಮಾಣ–ತೊಗಟೆಯ ಚೂರ್ಣ ವಾದರೆ 10–12 ಗುಂಜಿ ತೂಕ, ಬೇರಿನ ಸ್ವರಸ 20–25 ಗುಂಜಿ ತೂಕ, ಒಳ್ಳೆ ಅಥವಾ ಎಲೆ 1ತ್ತಿಂದ 5 ತೊಲೆಯುವರೆಗೆ ಮತ್ತು ಕಷಾಯವನ್ನು 12 ರಿಂದ 25 ಗುಂಜಿಯುವರೆಗೆ ಕೊಡುವ ಕ್ರಮವಿದೆ.

**127. ದವನ**—ಇದು ಪಾಚಕವೂ, ಅಗ್ನಿವರ್ಧಕವೂ, ಸ್ನಿಗ್ಧವೂ, ಆಗಿದ್ದು ಮಾಸಿಕ ಧರ್ಮದ ತಡೆಯನ್ನೂ ಹಿಸ್ಟೀರಿಯಾವನ್ನು(ಸೂತಕಸನ್ನಿ)ಗುಣಪಡಿಸುತ್ತದೆ. ಇದರ ಕ್ವಾಥ ಅಥವಾ ಗುಳಿಗೆಗಳನ್ನು ಔಷಧರೂಪವಾಗಿ ಕೊಡುವ ಕ್ರಮವಿದೆ; ಚರ್ಮರೋಗಗಳಲ್ಲಿ ಇದರ ಕಷಾಯವನ್ನು ಮಾಡಿ ತೊಳೆಯುವುದರಿಂದ

ಉಪಯೋಗವಾಗುತ್ತದೆ. ಮಕ್ಕಳ ಕ್ರಿಮಿರೋಗಗಳಲ್ಲೂ, ಕಫ ಸಂಬಂಧವಾದ ದೋಷಗಳಲ್ಲೂ ಇದು ಹೆಚ್ಚಿನ ಪರಿಣಾಮಕಾರಿಯಾಗಿರುತ್ತದೆ. ವಯೋಮಾನಕ್ಕೆ ತಕ್ಕಂತೆ ಇದರ ಕಷಾಯವನ್ನು 4 ರಿಂದ 5 ತೊಲೆಯವರೆಗೂ, ಸ್ವರಸವಾದರೆ 2 ರಿಂದ 4 ಚಮಚೆಯವರೆಗೂ ಕೊಡಬೇಕು.

**128. ದಾಳಿಂಬ**—ದಾಳಿಂಬವು ಆಮ್ಲವೂ, ತುಸು ಒಗರೂ, ಮಧುರವೂ, ವಾತನಾಶಕವೂ, ಗ್ರಾಹಿಯೂ, ದೀಪನವೂ, ಸ್ನಿಗ್ಧವೂ, ಉಷ್ಣವೀರ್ಯವೂ, ಹೃದ್ಯವೂ, ಆಗಿರುತ್ತದೆ; ಅಲ್ಲದೆ ಕಫ ಮತ್ತು ಪಿತ್ತದ ನಿವಾರಣೆಯನ್ನುಂಟುಮಾಡುತ್ತದೆ. ದಾಳಿಂಬದಲ್ಲಿ ಹುಳಿ ಮತ್ತು ಸಿಹಿಗಳೆಂಬ ಎರಡು ಬಗೆಗಳುಂಟು. ಹುಳಿ ದಾಳಿಂಬೆಯು ರುಚಿಯಾಗಿದ್ದರೂ ಪಿತ್ತ ಮತ್ತು ವಾತಗಳ ಪ್ರಕೋಪವನ್ನುಂಟು ಮಾಡುತ್ತದೆ. ಆದರೆ ಅದು ನೇತ್ರದೋಷಕ್ಕೆ ಅತಿ ಶ್ರೇಷ್ಠವಾಗಿದೆ. ಸಿಹಿ ದಾಳಿಂಬೆಯು ಪಿತ್ತನಾಶಕವಾಗಿದ್ದು ಉತ್ತಮವೆನಿಸಿಕೊಂಡಿದೆ. ಅಲ್ಲದೆ ಇದು ತ್ರಿದೋಷನಾಶಕವೂ, ಆಮ್ಲ, ವಾತ ಮತ್ತು ಕಫನಾಶಕವೂ ಆಗಿರುತ್ತದೆ. ಇದರ ಬೀಜವು ಸಂಕೋಚ ಶಕ್ತಿಯುಳ್ಳದ್ದಾಗಿದ್ದು ಪಾಚಕವೂ, ಕ್ಷುಧಾಜನಕವೂ ಆಗಿರುತ್ತದೆ ಮತ್ತು ಆಮಾಶಯಕ್ಕೆ ಶಕ್ತಿಯನ್ನೀಯುತ್ತದೆ. ಇದರ ಹೂವಿನ ರಸವು ಮೂಗಿನಿಂದ ರಕ್ತ ಸುರಿಯುವುದನ್ನು ನಿಲ್ಲಿಸುತ್ತದೆ. ಸಿಪ್ಪೆಯು ಅತಿಸಾರವನ್ನು ಗುಣಪಡಿಸುತ್ತದೆ. ಹೀಗೆ ದಾಳಿಂಬದ ಪ್ರತಿಯೊಂದೂ ಭಾಗವೂ ಔಷಧ ದ್ರವ್ಯವಾಗಿರುತ್ತದೆ. ರೋಗೋಕ್ತ ಅನುಪಾನವನ್ನು ಜೋಡಿಸಿಕೊಳ್ಳಬೇಕು.

**129. ದಾಸವಾಳ**—ದಾಸವಾಳವು ಲಘುವೂ, ಸ್ನಿಗ್ಧವೂ, ಮಧುರವೂ, ಕಷಾಯವೂ, ವಿಪಾಕದಲ್ಲಿ ಕಹಿಯೂ, ಉಷ್ಣವೀರ್ಯವೂ, ಕಫಪಿತ್ತನಾಶಾಮಕವೂ, ಸ್ತಂಭನವೂ, ಸೌಮ್ಯನಸ್ಯಜನನವೂ, ರಕ್ತಶೋಧಕವೂ, ಹೃದ್ಯವೂ, ವೃಷ್ಯವೂ, ಗರ್ಭಪುಷ್ಟಿಕಾರಕವೂ, ಮೂತ್ರಲವೂ, ಆಗಿದ್ದು ರಕ್ತಾತಿಸಾರ, ರಕ್ತಮೂಲವ್ಯಾಧಿ, ಮಸ್ತಿಷ್ಕ ದೌರ್ಬಲ್ಯ, ದಾಹ, ಉನ್ಮಾದ, ಹೃದ್ರೋಗ, ರಕ್ತಪಿತ್ತ, ರಕ್ತವಿಕಾರ, ಪ್ರಮೇಹ, ಜ್ವರ ಮೊದಲಾದುವುಗಳನ್ನು ಪರಿಹರಿಸುತ್ತದೆ. ದಾಸವಾಳದಲ್ಲಿ ಮೊದಲು ಕೇವಲ ನಾಲ್ಕಾರು ಬಣ್ಣದವುಗಳೂ, ಆಕಾರದವುಗಳೂ ಇದ್ದವು. ಆದರೆ ಇಂದದು ನೂರಾರು ವಿಧಗಳಾಗಿ ಮಾರ್ಪಡಿಸಲ್ಪಟ್ಟಿದೆ. ಇವುಗಳಲ್ಲಿ ಬಿಳಿಯ ದಾಸವಾಳವೇ ಔಷಧಕ್ಕೆ ಉತ್ತಮ. ಇದರ ಅಭಾವದಲ್ಲಿ ಬೇರೆಯ ದಾಸವಾಳಗಳನ್ನೂ ಉಪಯೋಗಿಸಲಡ್ಡಿಯಿಲ್ಲ. ದಾಸವಾಳದ ಹೂವು, ಎಲೆ, ಬೇರು, ತ್ವಕ್ಕುಗಳು ಕೂಡ ಔಷಧದ್ರವ್ಯವಾಗಿರುತ್ತವೆ. ಇದರ ಅನುಪಾನಾದಿಗಳನ್ನು ರೋಗೋಕ್ತವಾಗಿ ಜೋಡಿಸಿಕೊಳ್ಳಬೇಕು.

**130. ದಾಲಚಿನ್ನಿ**—ಇದು ಲಘುವೂ, ರೂಕ್ಷವೂ, ತೀಕ್ಷ್ಣವೂ, ಕಟುವೂ, ತಿಕ್ತವೂ, ಮಧುರವೂ, ಕಟುವಿಪಾಕವೂ, ಉಷ್ಣವೀರ್ಯವೂ ಆಗಿದ್ದು ಕಫವಾತಶಾಮಕವೂ, ಪಿತ್ತವರ್ಧಕವೂ, ದೀಪನವೂ, ಪಾಚನವೂ, ವಾತಾನುಲೋಮವೂ, ಶುಕ್ರಜನಕವೂ, ಯಕೃದುತ್ತೇಜಕವೂ, ಸಾಧಾರಣ ಗ್ರಾಹಿಯೂ, ಬಸ್ತಿಶೋಧಕವೂ, ಸ್ತಂಭಕವೂ, ರಕ್ತೋತ್ತೇಜಕವೂ(ರಕ್ತದಲ್ಲಿ ಬಿಳಿಯ ಕಣವರ್ಧಕ), ವೇದನಾಸ್ಥಾಪನವೂ, ಕಂಠಶೋಧಕವೂ, ಮೂತ್ರಲವೂ, ರಾಜಯಕ್ಷ್ಮನಾಶಕವೂ, ಗರ್ಭಾಶಯಸಂಕೋಚಕವೂ, ವಾಜೀಕರಣವೂ, ಕಾಮೋದ್ದೀಪನವೂ, ಆಗಿರುತ್ತದೆ. ಅಲ್ಲದೆ ನಾಡಿದೌರ್ಬಲ್ಯ, ಆಧ್ಮಾನ, ಆಕ್ಷೇಪ, ಹಿಕ್ಕಾ, ಕಾಸ, ಶ್ವಾಸ, ಹೃದ್ರೋಗ, ಪಕ್ಷಾಘಾತ, ಅರುಚಿ, ಅಗ್ನಿಮಾಂದ್ಯ, ಮುಖದಬಾವು, ತೃಷೆ, ಆಮದೋಷ, ಉದರಶೂಲೆ, ಗ್ರಹಣೀ, ಅರ್ಶ (ಮೂಲವ್ಯಾಧಿ), ಒಳಜ್ವರ, ಕ್ರಿಮಿ, ಪೀನಸ, ಕಂಡೂ, ಮೂತ್ರಕೃಚ್ಛ್ರ, ಪ್ರಾಯಾಮೇಹ, ರಜೋದೋಷ, ಗರ್ಭಾಶಯ ಶೈಥಿಲ್ಯ, ನಪುಂಸಕತಾ ಮೊದಲಾದವುಗಳ ಮೇಲೆ ಇದು ಒಳ್ಳೆಯ ಕೆಲಸವನ್ನು ಮಾಡುತ್ತದೆ. ಮಧುರರಸ, ಅಧಿಕವಾಗಿರುವ ದಾಲಚಿನ್ನಿ ಮರದ ತ್ವಕ್ಕು ಪಿತ್ತವರ್ಧಕವಾದರೂ ಸಾಮಾನ್ಯ ದಾಲಚಿನ್ನಿಯು ಪಿತ್ತವರ್ಧಕವಲ್ಲವೆಂಬುದನ್ನು ಮರೆಯಬಾರದು. ಮೇಲೆ ಬರೆದ ಗುಣಧರ್ಮಗಳೆಲ್ಲ ದಾಲಚಿನ್ನಿಮರದ ತ್ವಕ್ಕಿ (ಚಕ್ಕೆ)ನದು. ಇದು ಉತ್ತಮ ದೀಪನ, ಪಾಚನಯುಕ್ತವಾದ್ದರಿಂದ ಆಮಾಶಯದ ವಿಕಾರದ ಮೇಲೆ ವಿಶೇಷ ಪ್ರಯೋಜನಕಾರಿಯಾಗಿದೆ.

**131. ದ್ರಾಕ್ಷೆ**—ದ್ರಾಕ್ಷೆಯು ಲಘುವೂ, ಸ್ನಿಗ್ಧವೂ, ಮಧುರವೂ ಇದ್ದು ವಿಪಾಕದಲ್ಲೂ ಮಧುರತೆಯನ್ನೇ ಹೊಂದಿರುತ್ತದೆ. ಇದು ಶೀತಲ ವೀರ್ಯವಿದ್ದು ರೇಚಕವೂ, ಜ್ವರಘ್ನವೂ ಆಗಿರುತ್ತದೆ. ಇದರಿಂದ ತೃಷೆ, ದಾಹ, ಕ್ಷಯ, ಉದರದ ಉರಿ ಮೊದಲಾದವುಗಳು ನಿವಾರಣೆಯಾಗುವುದಲ್ಲದೆ ಶರೀರಕ್ಕೆ ಶಕ್ತಿಯೂ, ಶಾಂತಿಯೂ ಕೂಡ ಉಂಟಾಗುತ್ತದೆ. ಶರೀರದಲ್ಲಿ ನಶಿಸುತ್ತಿರುವ ರಸಧಾತುಗಳಿಗೆ ಪೋಷಣೆಯನ್ನಿತ್ತು ದೇಹಸ್ವಾಸ್ಥ್ಯವನ್ನುಂಟುಮಾಡುವ ಶಕ್ತಿಯು ದ್ರಾಕ್ಷೆಗಿದೆ. ಇದರಿಂದ ಮಲಬದ್ಧತೆಯು ನಿವಾರಣೆಯಾಗುತ್ತದೆ. ಇದರಲ್ಲಿ ಒಣಗಿದ ದ್ರಾಕ್ಷೆಯಲ್ಲಿ ತಾಳಿಕೆಯ ಶಕ್ತಿ ಇದೆ. ಹಸಿದ್ರಾಕ್ಷೆಯನ್ನು ಕೂಡಲೇ ಉಪಯೋಗಿಸಬೇಕು. ಆದರೆ ಎರಡರ ಗುಣವೂ ಬಹುತೇಕ ಒಂದೇ ಆಗಿರುತ್ತದೆ. ಹಸಿದ್ರಾಕ್ಷೆಯು ದೊರಕದಿರುವಾಗ ಒಣದ್ರಾಕ್ಷೆಯನ್ನೇ ಉಪಯೋಗಿಸಬೇಕು.

**132. ಧಾತಕೀಕುಸುಮ**—ಧಾತಕೀಕುಸುಮವು ಲಘು, ರೂಕ್ಷ, ಕಟು ಕಷಾಯ, ವಿಪಾಕದಲ್ಲೂ ಕಟು ಇದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ; ಅಲ್ಲದೆ

ಇದು ಕಫಪಿತ್ತಶಾಮವೂ, ಸ್ತಂಭಕವೂ, ಸಂಧಾನೀಯವೂ, ಸಂಗ್ರಾಹಕವೂ, ಉತ್ತೇಜಕವೂ, ಮಧುರವೂ, ದಾಹಪ್ರಶಮನವೂ, ರಕ್ತಸ್ರಾವರೋಧಕವೂ, ಮೃದುಕಾರಕವೂ, ಮೂತ್ರವಿರೇಚಕವೂ, ಗರ್ಭಸ್ಥಾಪಕವೂ, ವಿಷಘ್ನವೂ, ವ್ರಣಶೋಧಕವೂ, ಮತ್ತು ರೋಚಕವೂ ಆಗಿದೆ; ಅಲ್ಲದೆ ಇದರಿಂದ ಅತಿಸಾರ ಪ್ರವಾಹಿಕಾ, ರಕ್ತಾತಿಸಾರ, ಜ್ವರಾತಿಸಾರ, ಸಂಗ್ರಹಣಿ, ರಕ್ತಪ್ರದರ, ಶ್ವೇತಪ್ರದರ, ರಕ್ತಪಿತ್ತ, ಪೈತ್ತಿಕಪ್ರಮೇಹ, ಪೈತ್ತಿಕಜ್ವರ, ಅರ್ಶ, ಯಕೃದ್ವಿಕಾರ, ವಿಸರ್ಪ ಮತ್ತು ಇತರ ಚರ್ಮರೋಗಗಳೂ ನಿವಾರಣೆಯಾಗುತ್ತವೆ. ಧಾತಕೀಕುಸುಮದ ಕಷಾಯದಿಂದ ಗಾಯಗಳನ್ನು ತೊಳೆಯುವುದರಿಂದ ಗಾಯಗಳು ಬೇಗ ವಾಸಿಯಾಗುತ್ತವೆ; ಅಲ್ಲದೆ ಧಾತಕೀಕುಸುಮದ ಚೂರ್ಣವನ್ನು ಗಾಯದ ಮೇಲೆ ಲೇಪಿಸುವುದರಿಂದ ಗಾಯದ ದುರ್ವಾಸನೆಯು ದೂರವಾಗಿ ಗಾಯವು ಬೇಗ ಮುಚ್ಚಿಕೊಂಡು ಬರುತ್ತದೆ.

**133. ಧುಂಪರಾಸ್ಮೆ**—ಇದು ವಾತಘ್ನವೂ, ಕಫಘ್ನವೂ, ಆಗಿದ್ದು ಜಠರಾಗ್ನಿಯನ್ನು ವೃದ್ಧಿಮಾಡುವುದರಲ್ಲಿ ಉಪಯುಕ್ತವಾಗಿರುತ್ತದೆ. ಇದರಿಂದ ವಾತದೋಷವು ನಿವಾರಣೆಯಾಗುವುದಲ್ಲದೆ ಇದು ಸಂಧಿವಾತದ ಮೇಲೆ ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತದೆ. ಕಾಸಶ್ವಾಸದ ಮೇಲೂ ಮತ್ತು ಮಕ್ಕಳ ನೆಗಡಿ, ಶೀತಗಳ ಮೇಲೂ ಧುಂಪರಾಸ್ಮೆಯು ಸತ್ಪರಿಣಾಮವನ್ನುಂಟುಮಾಡುತ್ತದೆ. ಅಗ್ನಿಮಾಂದ್ಯ, ಅಪಚನ, ಹೊಟ್ಟೆ ಉಬ್ಬರಿಸುವಿಕೆ ಮೊದಲಾದ ರೋಗಗಳು ಧುಂಪರಾಸ್ಮೆಯಿಂದ ದೂರವಾಗುತ್ತವೆ. ಸಾಂಕ್ರಾಮಿಕ ರೋಗಗಳಿರುವಾಗ ಧುಂಪರಾಸ್ಮೆಯನ್ನು ಉಪಯೋಗಿಸುವುದು ಒಳ್ಳೆಯದು. ಇದು ಶುಂಠಿಯಂತೆ ಕೆಲಸವನ್ನು ಮಾಡುತ್ತದೆ; ದುರ್ಗಂಧವನ್ನೂ ಪರಿಹರಿಸುತ್ತದೆ.

**134. ನಸುಗುನ್ನಿ**—ಇದು ಗುರುವೂ, ಲಘುವೂ, ಸ್ನಿಗ್ಧವೂ, ಮಧುರವೂ, ತಿಕ್ತವೂ, ವಿಪಾಕದಲ್ಲೂ ಮಧುರವೇ ಆಗಿದ್ದು ಉಷ್ಣವೀರ್ಯದಿಂದ ಕೂಡಿರುತ್ತದೆ; ಅಲ್ಲದೆ ಇದು ತ್ರಿದೋಷಶಾಮಕವೂ, ವೃಷ್ಯವೂ, ಶೀತಪಿತ್ತ, ವ್ರಣ, ರಕ್ತಪಿತ್ತಗಳನಾಶಕವೂ ಆಗಿರುತ್ತದೆ; ಇದರ ಬೀಜಗಳನ್ನು ಅಂಗಡಿಯಿಂದ ಕೊಂಡು ತೆಗೆದುಕೊಳ್ಳುವುದಕ್ಕಿಂತ ಅರಣ್ಯಗಳಿಂದ ಶೇಖರಿಸಿ ತರುವುದೇ ಶ್ರೇಷ್ಠ; ಆದರೆ ಇದರ ಸಂಗ್ರಹಣೆಯಲ್ಲಿ ಬಹಳ ಎಚ್ಚರಿಕೆ ಬೇಕು; ಹಾಗೆ ಮಾಡದಿದ್ದರೆ ಮೈ ಎಲ್ಲ ತೀಟೆ, ತುರಿಕೆಗಳುಂಟಾಗಿ ಬಹಳ ತೊಂದರೆಪಡಬೇಕಾಗುತ್ತದೆ. ಆದುದರಿಂದ ಕೈಮೈಗಳಿಗೆ ಎಣ್ಣೆ ಹಚ್ಚಿ, ಇದರ ಸಂಗ್ರಹಣೆಯ ಕಾರ್ಯಕ್ಕೆ ನಿಲ್ಲಬೇಕು. ಇವುಗಳಲ್ಲೂ ಎರಡು ಜಾತಿಗಳುಂಟು; ಒಂದರಲ್ಲಿ ರೋಮ ಅತಿಯಾಗಿದ್ದು ತುರಿಕೆಯೂ ಹೆಚ್ಚಾಗಿ ಹುಟ್ಟಿಸುತ್ತದೆ. ಇನ್ನೊಂದು ತುರಿಕೆ ಕಡಿಮೆ. ಆದುದರಿಂದ ಇದನ್ನೇ ಸಂಗ್ರಹಿಸಿ ಮಾರಾಟಕ್ಕಿಡುತ್ತಾರೆ. ಆದರೆ ತುರಿಕೆ ಹೆಚ್ಚಾಗಿರುವ ಜಾತಿಯ ಬೀಜವೇ

ಶ್ರೇಷ್ಠಕಾಯಿಂದ ಬೀಜ. ಬಿಡಿಸಿದನಂತರ ಅಪಾಯವೇನಿಲ್ಲ...ಚರಕ, ಸುಶ್ರುತಾದಿ ಪ್ರಾಚೀನ ಆಚಾರ್ಯರುಗಳೂ ಇದಕ್ಕೆ ಅತಿ ಶ್ರೇಷ್ಠ ಸ್ಥಾನವನ್ನು ಕೊಟ್ಟಿದ್ದಾರೆ; ಇದರ ಬೀಜದ ಚೂರ್ಣವನ್ನು 6 ಗುಂಜಿಯಿಂದ 24 ಗುಂಜಿಯವರೆಗೂ, ಮತ್ತು ಬೇರಿನ ಸ್ವರಸವಾದರೆ 1 ತೊಲೆಯನ್ನೂ, ಬೇರಿನ ಕ್ವಾಥ (ಕಷಾಯ) ವಾದರೆ 5ರಿಂದ 10ತೊಲೆಯವರೆಗೊ ತುಪ್ಪ, ಜೇನು ಮೊದಲಾದ ರೋಗೋಕ್ತ ಅನುಪಾನಗಳೊಡನೆ ತೆಗೆದುಕೊಳ್ಳುವ ನಿಯಮವಿದೆ. ಅದಕ್ಕೆ ಮೀರಿದ ಪ್ರಮಾಣದಲ್ಲಿ ತೆಗೆದುಕೊಂಡರೆ ಅದು ಹಾನಿಯನ್ನುಂಟುಮಾಡುತ್ತದೆ.

**135. ನವಣೆ**—ಇದು ಜಡವೂ, ಮೂತ್ರಲವೂ, ಮಧುರವೂ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಇದು ಕಫಹರ, ಶಕ್ತಿದಾಯಕ, ಧಾತುವರ್ಧಕ-ವಾಗಿದ್ದು ಮುರಿದ ಮೂಳೆಯನ್ನು ಜೋಡಿಸುವುದರಲ್ಲಿ ಉಪಯುಕ್ತವಾಗಿರುತ್ತದೆ. ಆದರೆ ವಾತವನ್ನು ಕೆರಳಿಸುತ್ತದೆ ಮತ್ತು ಇದಕ್ಕೆ ಗರ್ಭಪಾತವನ್ನುಂಟುಮಾಡುವ ಶಕ್ತಿ ಇದೆ. ಮೃತವಂಧ್ಯತ್ವ (ಮಕ್ಕಳು ಪುಟ್ಟಿ ಹುಟ್ಟಿ ಸಾಯುವುದು ಅಥವಾ ಮೇಲಿಂದಮೇಲೆ ಗರ್ಭಪಾತವಾಗುವುದು) ಉಳ್ಳ ಸ್ತ್ರೀಯರು ಇದನ್ನು ಸೇವಿಸುವುದು ಹಾನಿಕರ. ಶ್ಲೇಷ್ಮರೋಗಿಗಳಿಗೆ ಇದು ಒಳ್ಳೆಯ ಪಥ್ಯವಾಗಿದೆ. ನೋವು, ಶೂಲೆಗಳ ಸಂದರ್ಭಗಳಲ್ಲಿ ಇದನ್ನು ನೀರಿನಲ್ಲರೆದು ಲೇಪಿಸುವ ರೂಢಿಯುಂಟು. ಸಂಧಿವಾತ, ಕೀಲುನೋವುಗಳಿಗೆ ಇದರ ಲೇಪನವು ಒಳ್ಳೆಯದು. ಇದು ಮೂತ್ರಲವಾಗಿರುವುದರಿಂದ ಇದರ ಕಷಾಯವನ್ನು ಮಾಡಿಕೊಟ್ಟರೆ ತಡೆದ ಮೂತ್ರವು ನಡೆಯುತ್ತದೆ: ನೀರ ಮುಟ್ಟು ಇದರ ಸೇವನೆಯಿಂದ ಪರಿಹಾರ-ವಾಗುತ್ತದೆ. ನವಣೆಯಲ್ಲಿ ಬೇರೆ ಬೇರೆ ಜಾತಿಗಳುಂಟು. ಆದರೆ ರಾಸಾಯನ ಕ್ರಿಯೆಯಲ್ಲಿ ಎಲ್ಲದರ ಗುಣಗಳು ಬಹುತೇಕ ಒಂದೇ ಆಗಿರುತ್ತದೆ.

**136. ನಾರುಂಬಾಳೆ** (ನಾರುಂಬೇಳೆ)—ಇದು ತೀವ್ರ ಘಾಟುಳ್ಳದ್ದೂ ಒಗರೂ, ಉಷ್ಣವೂ, ವಿರೇಚನವೂ, ಲಘುವೂ, ಖಾರವೂ, ಕಹಿಯೂ ಆಗಿದ್ದು, ಕಫ, ರಕ್ತಪಿತ್ತ, ಶ್ವಾಸ, ಕಾಸ, ಅರುಚಿ, ಜ್ವರ, ವಿಸ್ಫೋಟಕ, ಪ್ರಮೇಹ, ರಕ್ತವಿಕಾರ, ಯೋನಿರೋಗ, ಕ್ರಿಮಿ, ಪಾಂಡು, ಶೋಥೆ, ಮತ್ತು ಮೂತ್ರನಾಳ-ದಲ್ಲಿಯ ಕಲ್ಲುಗಳನ್ನು ನಿವಾರಣೆಮಾಡುತ್ತದೆ. ಇದರ ಸೊಪ್ಪಿನ ಪಲ್ಯ ಮತ್ತು ಹುಳಿಯನ್ನೂ ಮಾಡಿ ತಿನ್ನುವ ರೂಢಿಯುಂಟು. ಔಷಧಕ್ಕಾಗಿ ಇದರ ಸ್ವರಸವನ್ನು ಬಳಸುವ ಕ್ರಮವಿದೆ. ಇದು ವಿರೇಚಕವಾಗಿರುವುದರಿಂದ ಆಗಾಗ ಇದನ್ನು ಅಡಿಗೆಯಲ್ಲಿ ಉಪಯೋಗಿಸುವುದರಿಂದ ಮಲಬದ್ಧತೆಯು ನಿವಾರಣೆಯಾಗುತ್ತದೆ. ಇದು ಶೂಲಹರವೂ, ಹೌದು; ಆದುದರಿಂದ ಕಿವಿಶೂಲೆಯಲ್ಲಿ ಇದರ ರಸವನ್ನು ಕಿವಿಯಲ್ಲಿ ಮೂರು ನಾಲ್ಕು ತೊಟ್ಟು ಹಾಕುವುದರಿಂದ ಅದು ಪರಿಹಾರವಾಗುತ್ತದೆ.

**137. ನುಗ್ಗೆ**—ನುಗ್ಗೆಯು ದೀಪಕವೂ ಪಾಚಕವೂ ಆಗಿದ್ದು ಜಠರಾಗ್ನಿಯನ್ನು ಹೆಚ್ಚುಮಾಡುತ್ತದೆ. ಇದು ಒಗರು, ಸಿಹಿ, ಉಷ್ಣವೀರ್ಯವುಳ್ಳದ್ದಾಗಿ ಪಿತ್ತ ಮತ್ತು ಕಫಗಳನ್ನು ಪರಿಹರಿಸುತ್ತದೆ. ಇದಕ್ಕೆ ಕ್ಷಯ, ದಮ್ಮು, ಕುಷ್ಠ, ಗುಲ್ಮ ಮತ್ತು ಶೂಲೆಗಳನ್ನು ನಿವಾರಿಸುವ ಶಕ್ತಿ ಇದೆ. ಇದರ ಬೇರು, ಎಲೆ, ಚಕ್ಕೆ ಹುವ್ವು, ಕಾಯಿ, ಬೀಜಗಳೆಲ್ಲವೂ ಔಷಧ ದ್ರವ್ಯಗಳಾಗಿವೆ. ಇದರ ಲೇಪನದಿಂದ ಗಂಡಮಾಲೆ ಮತ್ತು ಇತರ ಎಲ್ಲಾ ಬಗೆಯ ಗ್ರಂಥಿಗಳೂ, ಗಡ್ಡೆಗಳೂ, ಮತ್ತು ಬಾವುಗಳೂ ನಿವಾರಣೆಯಾಗುತ್ತವೆ; ಅರೆತಲೆಶೂಲೆ, ಶಿರಾವರ್ತ, ಸೂರ್ಯಾವರ್ತವೇ ಮೊದಲಾದ ಶಿರೋವೇದನೆಗಳು ನುಗ್ಗೆಯ ರಸದ ನಸ್ಯದಿಂದ ನಿವಾರಣೆಯಾಗುತ್ತವೆ. ಮೂಲವ್ಯಾಧಿಯ ಮೇಲೆ ನುಗ್ಗೆಯು ಒಳ್ಳೆಯ ಪರಿಣಾಮಕಾರಿಯಾದ ಕೆಲಸ ಮಾಡುತ್ತದೆ.

**138. ನೆಲ್ಲಿ (ಆಮಲಕ)**—ಹೊಸದಾಗಿ ಕಿತ್ತ ನೆಲ್ಲಿಕಾಯಿಯು ಒಗರು, ಸ್ವಲ್ಪ ಹುಳಿ, ಕಟು, ಮಧುರ, ಶೀತಲ, ಲಘು, ರೂಕ್ಷ, ತ್ರಿದೋಷನಾಶಕವೂ, ಭೇದಿಯನ್ನುಂಟುಮಾಡುವಂತಹುದೂ, ತಲೆಯ ಕೂದಲಿಗೆ ಹಿತಕರವೂ ಮತ್ತು ಅರುಚಿ, ದಾಹ, ಪ್ರಮೇಹ, ಶೋಥ, ವಿಷಮಜ್ವರ, ತೃಷ್ಣಾ, ಮೇದೋವೃದ್ಧಿ, ಮೂತ್ರಕೃಚ್ಛ್ರ, ಭ್ರಮೆ, ಆಮ್ಲಪಿತ್ತ, ಕಾಸ, ಶ್ರಮ (ಬಳಲಿಕೆ), ವಿಬಂಧ, ಕುಷ್ಠಾದಿ ರಕ್ತವಿಕಾರ, ರಕ್ತಪಿತ್ತ, ಪಿತ್ತಪ್ರಕೋಪಜನ್ಯವ್ಯಾಧಿ ಮತ್ತು ಜರಾವ್ಯಾಧಿ (ಮುಪ್ಪಿನವ್ಯಾಧಿ) ನಾಶಕವೂ, ರಸಾಯನವೂ ಆಗಿದೆ; ಅಲ್ಲದೆ ಇದು ಬೃಂಹಣವೂ ವೀರ್ಯಜನಕವೂ ಹಾಗೂ ವೀರ್ಯದೋಷನಿವಾರಕವೂ ಆಗಿದೆ. ಶರೀರದಲ್ಲಿ ನಶಿಸಿರುವ ಮಲಯುಕ್ತವಾದ ಸಪ್ತಧಾತುಗಳ ಪರಮಾಣು ಘಟಕಗಳನ್ನು ಹೊರ ನೂಕಿ ಆ ಸ್ಥಾನದಲ್ಲಿ ನೂತನ, ಸಬಲಪರಮಾಣುಗಳನ್ನು ಸ್ಥಾಪಿಸುವ ಕಾರ್ಯವನ್ನು ಆಮಲಕವು ಮಾಡುತ್ತದೆ. ಆಮಲಕದ ಸೇವನೆಯಿಂದ ದೇಹಸ್ವಾಸ್ಥ್ಯದ ಜೊತೆಗೇ ತಾರುಣ್ಯವೂ ಪ್ರಾಪ್ತವಾಗುತ್ತದೆ. ಆದುದರಿಂದಲೇ ಅತೀ ಪ್ರಾಚೀನ ಕಾಲದಿಂದಲೂ ನೆಲ್ಲಿಕಾಯಿಯನ್ನು ಮೊರಬ್ಬಾ, ಪರಬತ್ತು, ಲೇಪ, ಪಾಕ, ಕಲ್ಪಗಳ ರೂಪದಲ್ಲಿ ಉಪಯೋಗಿಸುವ ಕ್ರಮವು ನಡೆದು ಬಂದಿದೆ. ನೆಲ್ಲಿಯ ಬೇರಿನಿಂದ ಹಿಡಿದು ಕಾಯಿಯವರೆಗೆ ಎಲ್ಲ ಭಾಗಗಳೂ ಔಷಧದ್ರವ್ಯಗಳೇ ಆಗಿವೆ; ಆದರೆ ಇದನ್ನು ಉಪಯೋಗಿಸಿಕೊಳ್ಳುವ ಜಾಣ್ಮೆ ಬೇಕು.

**139. ನೆಲಬೇವು**—ಇದು ಲಘುವೂ, ತಿಕ್ತವೂ, ವಿಪಾಕದಲ್ಲಿ ಕಟುವೂ ಮತ್ತು ಶೀತವೀರ್ಯವುಳ್ಳದ್ದೂ ಆಗಿರುತ್ತದೆ ಇದು ದೀಪನವೂ, ಕಫವರ್ಧನವೂ, ಪಾಚನವೂ, ಸಾರಕವೂ, ಪಿತ್ತಶಾಮಕವೂ, ರಕ್ತ ಪ್ರಸಾದನವೂ, ಮೂತ್ರಲವೂ ಮತ್ತು ಆರ್ತವ ಜನನವೂ ಆಗಿರುತ್ತದೆ. ಇದರಿಂದ ಅಪಚನ

ಜನ್ನಜ್ವರ, ಶೀತಜ್ವರ, ವಿಷಮಜ್ವರ, ಅತಿಸಾರ, ಉದರವಾತ, ದಾಹ, ತೃಷ್ಣಾ, ಕಾಸ, ಉದರಕ್ರಿಮಿ, ಮಧುಮೇಹ, ಚರ್ಮರೋಗ, ವ್ರಣ, ಶೋಥವೇ ಮೊದಲಾದ ರೋಗಗಳು ನಿವಾರಣೆಯಾಗುತ್ತವೆ. ಇದರ ಪಂಚಾಂಗದ ಚೂರ್ಣ 6 ರಿಂದ 18ಗುಂಜಿಯವರೆಗೆ, ಬೇರಿನಕ್ವಾಥ ಅಥವಾ ಕಷಾಯ 2½ತೊಲೆಯವರೆಗೆ ನೀರಿನಲ್ಲಿ ಕೊಡುವ ನಿಯಮವಿದೆ.

**140. ನೆಲಗುಳ್ಳ**—ಇದರಲ್ಲಿ ನೀಲಿ ಮತ್ತು ಬಿಳಿಯ ಹುವ್ವಿನ ಎರಡು ಜಾತಿಗಳುಂಟು; ನೀಲಿ ಹುವ್ವಿನ ನೆಲಗುಳ್ಳವು ಸಾರ್ವತ್ರಿಕವಾಗಿ ಎಲ್ಲ ಕಡೆಯೂ ದೊರೆಯುತ್ತದೆ; ಆದರೆ ಬಿಳಿಯ ಹುವ್ವಿನ ಜಾತಿ ಬಹುದುರ್ಬಲ; ಬಿಳಿಯ ಹುವ್ವಿನ ಜಾತಿಯ ನೆಲಗುಳ್ಳವನ್ನು 'ಲಕ್ಷ್ಮಣಾ' ಎಂದು ಕರೆಯುವ ವಾಡಿಕೆಯುಂಟು. ಇದು ವಿಶೇಷವಾಗಿ ಗರ್ಭಕಾರಿಣೀ ಎಂಬುದಾಗಿ ಜನಜನಿತವಾಗಿದೆ. ಆದರೆ ಈ ಬಿಳಿಯ ಮತ್ತು ನೀಲಿಯ ಎರಡೂ ಜಾತಿಗಳ ಗುಣಧರ್ಮಗಳೂ ಒಂದೇ ಎಂಬ ಅಭಿಪ್ರಾಯವಿದೆ; ಬಿಳಿಯದು ತೀವ್ರ ಪರಿಣಾಮಕಾರಿ ಎಂದು ಒಪ್ಪಿಕೊಂಡರೂ ನೀಲಿಯದರ ಗುಣಕ್ಕೂ ಅದಕ್ಕೂ ಹೆಚ್ಚಿನದೇನೂ ವ್ಯತ್ಯಾಸವಿಲ್ಲವೆಂದೇ ತಿಳಿಯಬೇಕು. ಇವೆರಡೂ ಗುಣಧರ್ಮಗಳಲ್ಲಿ ತಿಕ್ತ, ಕಟು, ಲಘು, ರೂಕ್ಷ, ತೀಕ್ಷ್ಣ ವಿಪಾಕದಲ್ಲೂ ಕಟುವೇ ಇದ್ದು ಉಷ್ಣವೀರ್ಯವುಳ್ಳವುಗಳಾಗಿರುವುದರಿಂದ ಕಫವಾತ ಶಾಮಕವೂ, ವೇದನಾಸ್ಥಾಪನವೂ, ಶೋಥಹರವೂ, ಮತ್ತು ಕ್ರಿಮಿಘ್ನವೂ, ಆಗಿವೆ. ಅಲ್ಲದೆ ಕಟು, ತಿಕ್ತ ಮತ್ತು ಉಷ್ಣವೀರ್ಯವುಳ್ಳವುಗಳಾಗಿರುವುದರಿಂದ ದೀಪನವೂ ಪಾಚನವೂ ಆಗಿವೆ; ತೀಕ್ಷ್ಣವಾಗಿರುವುದರಿಂದ ರೋಚಕವೂ; ಕ್ರಿಮಿಘ್ನವೂ ಆಗಿವೆ. ಇದರಿಂದ ಜ್ವರ, ಅರುಚಿ, ಆಮದೋಷ, ಪೀನಸ, ಪಾರ್ಶ್ವಪೀಡೆ, ಹೃದ್ರೋಗ, ರಕ್ತದೋಷ, ಮೂತ್ರತಡೆಗಳೆಲ್ಲ ನಿವಾರಣೆಯಾಗುತ್ತವೆ; ಅಲ್ಲದೆ ಇದು ಮೂತ್ರಲವೂ ಹೌದು.

**141. ನೆನೆಅಕ್ಕಿ** (ಹಚ್ಚೆ)—ಇದು ಗುರುವೂ, ರೂಕ್ಷವೂ, ಕಟುವೂ, ತಿಕ್ತವೂ, ಮಧುರವೂ, ವಿಪಾಕದಲ್ಲಿ ಕಟುವೂ, ಉಷ್ಣವೀರ್ಯಉಳ್ಳದ್ದೂ ಆಗಿರುತ್ತದೆ. ಅಲ್ಲದೆ ಇದು ಕಫಪಿತ್ತಹರವೂ, ವಾತವರ್ಧಕವೂ, ಅನುಲೋಮನವೂ, ಮೂತ್ರಲವೂ, ಛೇದನವೂ, ಉತ್ತೇಜಕವೂ, ರಕ್ತಶೋಧಕವೂ, ವೃಷ್ಯವೂ, ಆರ್ತವಜನನವೂ, ಗರ್ಭಕಾರಕವೂ, ಪಾರಬಂಧಕವೂ, ಆಗಿರುತ್ತದೆ ಮತ್ತು ಕ್ರಿಮಿ, ಕಾಸಶ್ವಾಸ, ಕುಷ್ಠ, ಉದರರೋಗ, ವಿಬಂಧ, ಪ್ರವಾಹಿಕಾ, ಹೃದ್ದೌರ್ಬಲ್ಯ, ಉಪದಂಶ, ಪೂಯಮೇಹ, ರಕ್ತವಿಕಾರ, ಮೂತ್ರಕೃಚ್ಛ್ರ, ಯೋನಿಸ್ರಾವ, ಶುಕ್ರದೋಷ, ರಜೋರೋಧ, ವಿಷ ಮೊದಲಾದವುಗಳನ್ನು ನಿವಾರಿಸುವಲ್ಲಿ ಉಪಯುಕ್ತವಾಗಿದೆ. ಇದರ ಸಮೂಲದ ಅರ್ಕವು ಯಕೃತ್

ಶೋಥ, ರಕ್ತದಕೊರತೆ ಮತ್ತು ಜಲೋದರದಲ್ಲಿ ಹೆಚ್ಚಿನ ಪ್ರಯೋಜನಕಾರಿ ಯಾಗಿದೆ.

**142. ನೇರಲೆ**—ಇದರ ಫಲವು ಲಘುವೂ, ರೂಕ್ಷವೂ, ಕಷಾಯವೂ ಮಧುರವೂ, ಆಮ್ಲವೂ, ವಿಪಾಕದಲ್ಲೂ ಮಧುರವೇ ಆಗಿದ್ದು ಕಫಪಿತ್ತಶಾಮಕವೂ ಪ್ರಬಲವಾತವರ್ಧಕವೂ, ರಕ್ತಸ್ತಂಭಕವೂ, ತ್ವಗ್ದೋಷಹರವೂ, ದಾಹಪ್ರಶಮ ನವೂ, ದೀಪನವೂ, ಪಾಚನವೂ, ಯಕೃದುತ್ತೇಜಕವೂ, ಮಲರೋಧಕವೂ ಶ್ರಮಹರವೂ, ತೃಷಾಶಾಮಕವೂ, ಅತಿಸಾರ, ಶ್ವಾಸ, ಕಾಸ, ಜ್ವರ ಕ್ರಿಮಿ ಮೊದ ಲಾದುವುಗಳ ಪರಿಹಾರಕವೂ ಆಗಿದೆ. ಇದರ ಹಣ್ಣನ್ನು ಊಟವಾದ ನಂತರ 2–3 ಗಂಟೆ ಬಿಟ್ಟು ತಿನ್ನುವುದು ಬಹು ಒಳ್ಳೆಯದು; ಇದರ ಜೊತೆಯಲ್ಲಿ ಉಪ್ಪು ಮೆಣಸಿನಕಾಳು, ಶುಂಠಿ ಮತ್ತು ಅಜವಾನಗಳನ್ನು ಸೇರಿಸಿ ತಿನ್ನುವುದರಿಂದ ತ್ರಿದೋಷದ ನಿವಾರಣೆಯಾಗುತ್ತದೆ; ಅರ್ಧ ಪಕ್ವವಾದ ಹಣ್ಣನ್ನು ತಿನ್ನುವುದರಿಂದ ಕೆಮ್ಮು ಮತ್ತು ಗಂಟಲುಕಟ್ಟು ಉಂಟಾಗುತ್ತದೆ; ಇದರ ಹಣ್ಣು ಮತ್ತು ಹಣ್ಣಿನ ಬೀಜಗಳು ಯಕೃತ್ತಿನ ಕಾರ್ಯವನ್ನು ಸುಧಾರಿಸಿ ಮೂತ್ರದಲ್ಲಿಯ ಸಕ್ಕರೆಯನ್ನು ಪರಿಹರಿಸುತ್ತದೆ; ಇದರಲ್ಲಿ ಸ್ವಲ್ಪ ಲೋಹಾಂಶವಿರುವುದರಿಂದ ಆದು ಯಕೃತ್ತು, ಪ್ಲೀಹ ಮತ್ತು ಉದರ ಸಂಬಂಧವಾದ ರೋಗಗಳನ್ನು ಗುಣಪಡಿಸುತ್ತದೆ.

**143. ಟೊಮೆಟೊ**—ಇದು ಆಮ್ಲ, ಮಧುರ, ಶೀತವೀರ್ಯ, ವಿಪಾಕ ದಲ್ಲೂ ಮಧುರವಿದ್ದು ಶೀತಕರ, ದೀಪನ, ಪಾಚನ, ಸಾರಕ ಮತ್ತು ರಕ್ತಶೋಧಕವೂ ಆಗಿರುತ್ತದೆ. ಅಗ್ನಿಮಾಂದ್ಯ, ಮಧುಮೇಹ, ಅತಿಸಾರ, ಮೇದೋವೃದ್ಧಿ, ಉದರ ರೋಗ; ರಕ್ತಪಿತ್ತ, ಅಂತ್ರಪುಚ್ಛದಾಹ (ಅಪೆಂಡಿಸೈಟಿಸ್), ಬೆರಿಬೆರೀ, ಹೃದ್ದೌ ರ್ಬಲ್ಯ ಮೊದಲಾದ ರೋಗಗಳಲ್ಲಿ ಇದು ಹೆಚ್ಚಿನ ಪ್ರಯೋಜನಕಾರಿಯಾಗಿದೆ. ಮಕ್ಕಳಿಗೆ ಒಂದೆರಡು ಚಮಚದಿಂದ ಪ್ರಾರಂಭಿಸಿ ಅವರವರ ವಯೋಮಾನಕ್ಕೆ ತಕ್ಕಂತೆಯೂ ಮತ್ತು ದೊಡ್ಡವರಿಗೆ 10–12 ಚಮಚೆಯುವರೆಗೂ ನಿತ್ಯ ಕೊಡಬಹುದು; ಇದನ್ನು ಪ್ರತಿದಿನವೂ ಅತಿ ಹೆಚ್ಚಾಗಿ ತಿನ್ನುವುದರಿಂದ ಧಾತು ದೋಷವೂ, ವೀರ್ಯದ ಅಶಕ್ತತೆಯೂ ಉಂಟಾಗುತ್ತದೆಯಲ್ಲದೆ ಅಗ್ನಿಮಾಂದ್ಯ ಮೂಲವ್ಯಾಧಿಯು ವಿಕಾರವೂ ಉಂಟಾಗುತ್ತದೆ.

**144. ಪಡವಲು**—ಇದು ಲಘು, ಸ್ನಿಗ್ಧ, ಮಧುರ, ತಿಕ್ತ, ವಿಪಾಕ ದಲ್ಲೂ ಮಧುರತೆ ಇದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ; ಅಲ್ಲದೆ ಇದು ರೋಚ ನವೂ, ದೀಪನವೂ, ಪಾಚನವೂ, ಹೃದ್ಯವೂ, ಅನುಲೋಮನವೂ, ಬಲ್ಯವೂ ಪಥ್ಯವೂ, ಕಫಪಿತ್ತಶಾಮಕವೂ ರಕ್ತ ಶೋಧಕವೂ ಆಗಿದ್ದು ಜ್ವರ, ಅರುಚಿ, ಅಗ್ನಿಮಾಂದ್ಯ, ಆಮದೋಷ, ವಿಬಂಧ, ರಕ್ತವಿಕಾರ, ಕಾಸ, ಕ್ರಿಮಿ, ಶೋಥ

ಮೊದಲಾದುವುಗಳ ನಿವಾರಣೆಯಾಗುತ್ತದೆ. ಕ್ಷಯ, ಜ್ವರ, ಕಂಡೂ ಮತ್ತು ರಕ್ತ ವಿಕಾರಗಳಲ್ಲಿ ಇದು ಪಥ್ಯವೂ ಆಗಿರುತ್ತದೆ. ಇದರ ಚೆನ್ನಾಗಿ ಬಲಿತಕಾಯಿ ಮತ್ತು ಬೀಜಗಳನ್ನು ಕ್ರಿಮಿರೋಗಗಳ ಪರಿಹಾರಕ್ಕಾಗಿ ಕೊಡಲಾಗುತ್ತದೆ. ಇದರ ಸ್ವರಸ 1–2 ತೊಲೆಯಷ್ಟನ್ನು, ಬೀಜದ ಚೂರ್ಣ 6 ರಿಂದ 13 ಗುಂಜಿಯನ್ನು ಕೊಡುವ ನಿಯಮವಿದೆ. ಇದರ ಬಲಿತ ಕಾಯಿಯು ಪಿತ್ತನಾಶಕ, ಪಂಚಾಂಗವು ಕಫಘ್ನ ಮತ್ತು ಬೇರು ರೇಚಕವಾಗಿರುತ್ತದೆ. ಆದರೆ ಇದು ಶೀತ ಪ್ರಕೃತಿಯ ವರಿಗೆ ಅತಿ ಹೆಚ್ಚಾಗಿ ಸೇವಿಸಲು ಯೋಗ್ಯವಲ್ಲ. ಅವರಿಗೆ ಇದು ನಿರ್ಬಲತೆಯನ್ನು ಮತ್ತು ಆಮಾಶಯದಲ್ಲಿ ದೋಷವನ್ನು ಉಂಟುಮಾಡುವುದಲ್ಲದೆಕಾಮೇಂದ್ರಿಯಗಳ ಮೇಲೆ ದುಷ್ಪರಿಣಾಮವನ್ನುಂಟುಮಾಡುತ್ತದೆ.

**145. ಪರಪಾಷ್ಟಕ**—ಇದು ತಿಕ್ತವೂ, ದೀಪನವೂ, ಪಾಚನವೂ, ಮೃದು ಸಾರಕವೂ, ಮಾಸಿಕಧರ್ಮ ನಿಯಾಮಕವೂ, ಉದರ ಮತ್ತು ಕರುಳಿನ ದೋಷ ನಿವಾರಕವೂ, ವಿಷಘ್ನವೂ, ಕೀಟಾಣುನಾಶಕವೂ, ಮೂತ್ರಾಶಯೋತ್ತೇಜಕವೂ, ಗರ್ಭಾಶಯ ದೋಷ ನಿವಾರಕವೂ ಮತ್ತು ಸಂಗ್ರಾಹಕವೂ ಆಗಿರುತ್ತದೆ. ಸೂತಿಕಾ ರೋಗದ ಔಷಧಗಳ ಜೊತೆಯಲ್ಲಿ ಅನುಪಾನದಲ್ಲಿ ಇದರ ಸ್ವರಸವನ್ನು ವಿಶೇಷ ವಾಗಿ ಕೊಡುವ ಕ್ರಮವಿದೆ. ಇದು ಸ್ವೇದಲವಾದುದರಿಂದ ಇದರ ಕ್ವಾಥ ಅಥವಾ ಕಷಾಯವನ್ನು ಕೊಡುವುದರಿಂದ ಬೆವರು ಬಂದು ಜ್ವರ ನಿವಾರಣೆಯಾಗುತ್ತದೆ. ಸ್ವರಸ 1 ತೊಲೆಯಿಂದ 2 ತೊಲೆಯವರೆಗೆ ಮತ್ತು ಕಷಾಯ 4 ರಿಂದ 6 ತೊಲದ ವರೆಗೆ ಕೊಡುವ ಕ್ರಮವಿದೆ.

**146. ಪಾಷಾಣ ಭೇದಿ**—ಇದು ರೂಕ್ಷವೂ, ಬಲವರ್ಧಕವೂ, ಸ್ವಚ್ಛತಾ ಪ್ರದವೂ, ಕಾಂತಿದಾಯಕವೂ, ಶೋಥಹರವೂ ಆಗಿದೆ. ಇದರಿಂದ ಮಲಬದ್ಧತೆ ಶೀತಬಾಧೆ, ಪಕ್ಕೆಶೂಲೆ, ಆಮಾಶಯದ ಬಾಧೆಗಳು ಪರಿಹಾರವಾಗುತ್ತವೆ. ಅಲ್ಲದೆ ಇದು ಮೂತ್ರಕಾರಕವೂ,ಪಾಂಡು, ಪ್ರಮೇಹ, ಶುಕ್ರಮೇಹಗಳ ನಿವಾರಕವೂಆಗಿದ್ದು ಹುಚ್ಚುನಾಯಿಯ ಕಡಿತದ ಮತ್ತು ಎಲ್ಲ ವಿಷಜಂತುಗಳ ಕಡಿತದ ವಿಷವನ್ನೂ ಪರಿಹಾರಮಾಡುತ್ತದೆ; ಆದರೆ ಉಷ್ಣಪ್ರಕೃತಿಯುಳ್ಳವರಿಗೆ ಸ್ವಲ್ಪ ಕೆಡುಕನ್ನುಂಟು ಮಾಡುತ್ತದೆ. ಪಾಷಾಣಭೇದಿಯು ಭಾರತದ್ದೇಅಲ್ಲದೆ ವಿದೇಶದಿಂದಲೂ ಬರುತ್ತದೆ; ಅದೂ ಕೂಡ ಇದೇ ಗುಣವನ್ನು ಹೊಂದಿರುತ್ತದೆ; ಆದರೂ ಬಣ್ಣದಲ್ಲಿ ಇರುವಿಕೆ ಯಲ್ಲಿ ಸ್ವಲ್ಪ ವ್ಯತ್ಯಾಸವಿದೆ; ಮಣ್ಣು, ನೀರು, ವಾಯುಗಳ ಭೇದದಿಂದಾಗಿ ಇವುಗಳಲ್ಲೂ ಸ್ವಲ್ಪ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಹೀಗೆ ನಾಲ್ಕು ಜಾತಿಯ ಪಾಷಾಣ ಭೇದಿಯು ಇರುವುದಾಗಿ ತಜ್ಞವೈದ್ಯರ ಅಭಿಪ್ರಾಯವಿದೆ;ಆದರೆ ರಾಸಾಯನಿಕ ಕ್ರಿಯೆಯಲ್ಲಿ ಎಲ್ಲವುಗಳ–ಗುಣಧರ್ಮಗಳೂ ಒಂದೇ ಆಗಿರುತ್ತದೆ.

**147. ಫುಲ್ಲಂಪುರುಚಿ**—ಇದು ಲಘುವೂ, ತೀಕ್ಷ್ಣವೂ, ಆಮ್ಲವೂ, **ಕಿಂಚಿತ್ ಕಷಾಯವೂ**, ಉಷ್ಣವೀರ್ಯವೂ ಆಗಿದ್ದು ವಿಪಾಕದಲ್ಲಿ ಆಮ್ಲವಾಗಿರುತ್ತದೆ. ಇದು ಕಫವಾತಶಾಮಕವಾಗಿದ್ದು, ಪಿತ್ತವರ್ಧಕವೂ, ರೋಚನವೂ, ದೀಪನವೂ, ಯಕೃತುದ್ದೀಜಕವೂ, ಗ್ರಾಹಿಯೂ, ಸ್ವಲ್ಪಸಾರಕವೂ, ಲೇಖನವೂ ವೇದನಾಸ್ಥಾಪನವೂ, ಹೃದ್ಯವೂ, ರಕ್ತಸ್ತಂಭಕವೂ, ದಾಹಪ್ರಶಮನವೂ, ಮೂತ್ರಲವೂ, ಸಂಕೋಚಕವೂ, (ಸೂಕ್ಷ್ಮದಮನಿಗಳ ಸಂಕೋಚವನ್ನುಂಟುಮಾಡಿ ರಕ್ತಸ್ರಾವವನ್ನು ನಿಲ್ಲಿಸುತ್ತದೆ) ಆಗಿದೆ. ಇದರಿಂದ ಮಾದಕವಿಷ (ವಿಶೇಷವಾಗಿ ದತ್ತೂರಿ ಮತ್ತು ಅಫೀಮು) ಪರಿಹಾರವಾಗುತ್ತದೆ. ಮತ್ತು ಅರುಚಿ, ಅಗ್ನಿಮಾಂದ್ಯ, ಗ್ರಹಿಣಿ, ಅರ್ಶ, ರಕ್ತಾತಿಸಾರ, ರಕ್ತಪ್ರವಾಹಿಕಾ, ಗುದಭ್ರಂಶ, ಹೃದ್ವಿಕಾರ, ಕಾಮಲಾ, ಜ್ವರ (ಮುಖ್ಯವಾಗಿ ಚಾತುರ್ಥಿಕ ಜ್ವರ) ಮೊದಲಾದುವುಗಳು ನಿವಾರಣೆಯಾಗುತ್ತವೆ. ಮದಾತ್ಯಯರೋಗದಲ್ಲಿ ಇದರ ಸ್ವರಸವು ಬಹಳ ಉಪಯೋಗಿ; ಇದರ ಲೇಪನದಿಂದ ಕಣ್ಣಿನರೋಗಗಳು ಪರಿಹಾರವಾಗುತ್ತವೆ. ಇದರ ಸ್ವರಸ 6 ಗುಂಜಿಯಿಂದ 1 ತೊಲೆಯವರೆಗೆ ಕೊಡುವ ನಿಯಮವಿದೆ.

**148. ಪುಷ್ಕರಮೂಲ**—ಪುಷ್ಕರಮೂಲಕ್ಕೆ ಇನ್ನೊಂದು ಹೆಸರು ಶ್ವಾಸರಿ ಎಂದಿರುವುದರಿಂದಲೇ ಇದು ಶ್ವಾಸರೋಗದ ನಿವಾರಣೆಯನ್ನು ಮಾಡುತ್ತದೆ ಎಂದು ತಿಳಿಯಬಹುದು. ಪುಷ್ಕರಮೂಲವು ಸ್ವಲ್ಪ ಖಾರವೂ ಮತ್ತು ಘಾಟುಳ್ಳದ್ದೂ ಆಗಿದ್ದು ಕಹಿಯೂ ಮತ್ತು ಉಷ್ಣವೀರ್ಯಯುಕ್ತವೂ ಆಗಿರುತ್ತದೆ. ಇದರಿಂದ ಕಫ, ವಾತ, ಶ್ವಾಸ, ಕಾಸ, ಅರುಚಿ, ಬಾವು, ಅಂಟುರೋಗ, ಊರ್ಧ್ವವಾತ ಮತ್ತು ಹಿಕ್ಕಾರೋಗಗಳು ನಿವಾರಣೆಯಾಗುತ್ತವೆ. ಅಲ್ಲದೆ ಇದು ಪಾರ್ಶ್ವಶೂಲೆಯ ಮೇಲೆ ಹೆಚ್ಚಿನ ಸತ್ಪರಿಣಾಮವನ್ನುಂಟುಮಾಡುತ್ತದೆ. ಪುಷ್ಕರಮೂಲದ ಅರ್ಕವನ್ನು ಕೂಡ ತೆಗೆದು ಮೇಲಿನ ರೋಗಗಳ ಮೇಲೆ ಕೊಡುವ ಕ್ರಮವಿದೆ. ಯುನಾನಿ ವೈದ್ಯರ ಅಭಿಪ್ರಾಯದಲ್ಲೂ ಪುಷ್ಕರಮೂಲದ ವಿಷಯವಾಗಿ ಇದೇ ಅಭಿಪ್ರಾಯವಿದೆ.

**149. ಪುದೀನ**—ಇದು ದೀಪಕ, ಪಾಚಕ, ವಾತಘ್ನವಿದ್ದು ಸುಗಂಧಿತವಿರುತ್ತದೆ. ಇದರಿಂದ ಅಜೀರ್ಣ, ವಾಕರಿಕೆ, ವಾತಶೂಲೆ, ಭೇದಿ ಮೊದಲಾದುವುಗಳು ನಿವಾರಣೆಯಾಗುತ್ತವೆ; ಊಟಕ್ಕೆ ಇದರ ಚಟ್ನಿಯನ್ನು ಮಾಡುವ ರೂಢಿಯುಂಟು, ಇದು ರುಚಿಯನ್ನೂ, ಹಸಿವನ್ನೂ ಹೆಚ್ಚಿಸುತ್ತದೆ. ಅಜೀರ್ಣವನ್ನು ನಿವಾರಿಸುತ್ತದೆ ಆದುದರಿಂದ ಸ್ವಾಭಾವಿಕವಾಗಿ ಇದನ್ನು ಚಟ್ನಿಸೊಪ್ಪೆಂದೇ ಕರೆಯುವ ವಾಡಿಕೆಯುಂಟು. ಪುದೀನವನ್ನು ಮೆಂಥಾಲು ಮತ್ತು ಪೆಪ್ಪರಮಿಂಟ್ ಅರ್ಕವನ್ನು (ತೈಲವನ್ನು) ತೆಗೆಯುವುದಕ್ಕಾಗಿ ಉಪಯೋಗಿಸುತ್ತಾರೆ. ಈ ಅರ್ಕವು

ಬಹುಬೇಗ ಆವಿಯಾಗಿ ಹೋಗುತ್ತದೆ. ಪುದೀನಗಿಡದಲ್ಲಿ ಬಿಡುವ ಹುವ್ವಿನಿಂದ ಪೆಪ್ಪರ್‌ಮಿಂಟು ಅರ್ಕವನ್ನು ಸಿದ್ಧಗೊಳಿಸಿದರೆ ಉಳಿದ ಭಾಗದಿಂದ ಮೆಂಥಾಲ್ ತಯಾರಾಗುತ್ತದೆ. ಎಲ್ಲಾ ಬಗೆಯ ನೋವು, ಶೂಲೆಗಳ ಮೇಲೂ ಈ ಅರ್ಕಗಳು ಬಹು ತ್ವರಿತಗತಿಯಿಂದ ಕೆಲಸಮಾಡಿ ನೋವನ್ನು ಪರಿಹರಿಸುತ್ತವೆ. ಪುದೀನ ಸೊಪ್ಪನ್ನು ಚೂರ್ಣ, ಕಷಾಯ, ಚಟ್ನಿಗಳ ರೂಪದಲ್ಲಿ ಬಳಸಲಾಗುತ್ತದೆ. ಕಾಲರಾ ಅಜೀರ್ಣಭೇದಿ ಮೊದಲಾದ ಸಾಂಕ್ರಾಮಿಕ ರೋಗವಿರುವಲ್ಲಿ ಪುದೀನವನ್ನು ನಿತ್ಯ ಆಹಾರದಲ್ಲಿ ಬಳಸುವುದು ಬಹು ಒಳ್ಳೆಯದೆಂದು ಅನುಭವದಿಂದ ಕಂಡು ಬಂದಿದೆ.

**150. ಪುತ್ರಂಜೀವಿ**—ಇದು ಕಟುವೂ. ಲವಣರಸಯುಕ್ತವೂ ರೂಕ್ಷವೂ, ಗುರುವೂ, ಶೀತಲವೂ, ಸ್ವಾದುವೂ, ಸುಗಂಧಿತವೂ, ಮೂತ್ರಪ್ರವರ್ತಕವೂ, ವೃಷ್ಯವೂ, ಕಾಮೋದ್ದೀಪಕವೂ, ಗರ್ಭಪ್ರದವೂ, ನೇತ್ರಹಿತಕರವೂ ಮತ್ತು ವಾತ, ಕಫ, ತೃಷ್ಣಾ, ವಮನ, ದಾಹ, ವಿಸರ್ಪ, ಶ್ಲೀಪದವೇ ಮೊದಲಾದುವುಗಳ ನಿವಾರಕವೂ ಆಗಿದೆ. ಪುತ್ರಂಜೀವಿಯ ಬೀಜದ ಸೊಪ್ಪು, ಬೇರು, ಅಥವಾ ಎಲೆಗಳನ್ನು ಹಾಲಿನೊಡನೆ ಸೇವಿಸುವುದರಿಂದ ಮೃತವಂಧ್ಯತ್ವವು ನಿವಾರಣೆಯಾಗುತ್ತದೆ. ಗಂಡುಸಂತಾನವಾಗುತ್ತದೆ.

**151. ಫರಂಗಿಚಕ್ಕೆ**—ಇದು ಲಘು; ರೂಕ್ಷ, ತಿಕ್ತ, ಕಟು, ವಿಪಾಕದಲ್ಲೂ ಕಟುವಾಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಇದು ತ್ರಿದೋಷಶಾಮಕ, ದೀಪನ, ಅನುಲೋಮನ, ಮಲಮೂತ್ರಶೋಧಕ, ವೇದನಾಸ್ಥಾಪಕ, ರಕ್ತಶೋಧಕ ವೃಷ್ಯ, ಶುಕ್ರಶೋಧಕ, ಮೂತ್ರಲ, ಸ್ವೇದಲ ಕಟುಪೌಷ್ಟಿಕವಾಗಿದ್ದು, ಇದರ ಗುಣ ಧರ್ಮಗಳು ಅಶ್ವಗಂಧಿಯಂತೆ ಇರುತ್ತದೆ. ಇದು ಉನ್ಮಾದ, ಅಪಸ್ಮಾರ, ಅಗ್ನಿಮಾಂದ್ಯ, ಆದ್ಮಾನ, ಶೂಲ, ವಿಬಂಧ; ಕ್ರಿಮಿ, ಶೋಥ, ಗಂಡಮಾಲಾ, ಜ್ವರ, ದೌರ್ಬಲ್ಯ, ಪ್ರಾಯಮೇಹ ಮತ್ತು ಇದರಿಂದುಂಟಾದ ಸಂಧಿವಾತ, ಸಂಧಿಶೋಥಗಳನ್ನೂ, ರಕ್ತವಿಕಾರಗಳನ್ನೂ, ಕುಷ್ಠವೇ ಮೊದಲಾದ ಚರ್ಮರೋಗಗಳನ್ನೂ, ಉಪದಂಶವೇ ಮೊದಲಾದ ರೋಗಗಳನ್ನೂ ನಿವೃತ್ತಿಗೊಳಿಸುತ್ತದೆ. ದುರ್ಬಲತೆಯನ್ನು ನಿವಾರಿಸಲು ಇದೊಂದು ರಸಾಯನವೇ ಆಗಿದೆ; ಶೂಲೆ, ನೋವು, ಬಾವುಗಳ ಮೇಲೆ ಇದರ ಲೇಪನವನ್ನು ಮಾಡುವ ಕ್ರಮವಿದೆ. ಇದರ ಬೇರು ಮತ್ತು ಗಡ್ಡೆಗಳೇ ಔಷಧ ರೂಪವಾಗಿ ಉಪಯೋಗಿಸಲ್ಪಡುವ ಔಷಧದ್ರವ್ಯಗಳು. ಇದರ ಚೂರ್ಣ 10 ರಿಂದ 18 ಗುಂಜಿಯವರೆಗೆ ಅಷ್ಟೇ ಜೇನಿನಲ್ಲಿ ಕಲಸಿ ತಿಂದು ಮೇಲೆ ಹಾಲು ಕುಡಿಯಬೇಕೆಂಬ ನಿಯಮವಿದೆ. ದಿನಕ್ಕೆ 2 ವೇಳೆ.

**152. ಬಳ್ಳಿತುರುಚಿ**—ಇದು ವಿರೇಚನ, ಶೀತಲ, ಕಹಿ, ರಕ್ತಶೋಧಕ, ವಾಗಿದ್ದು ಇದರಿಂದ ವಿಷಮಜ್ವರ, ಬಾಯಾರಿಕೆ, ವಾಕರಿಕೆ, ಗುಲ್ಮ, ಪ್ರಮೇಹ

ರಕ್ತವಿಕಾರ, ರಕ್ತಪಿತ್ತ, ಕಫ, ಶ್ವಾಸ, ವಿಷ, ಅತಿಸಾರ, ವಾತಪಿತ್ತ, ಜ್ವರ ಕುಷ್ಠಾದಿಗಳಂ ನಿವಾರಣೆಯಾಗುತ್ತವೆ. ಪ್ರತಿದಿನ ದಿನಕ್ಕೆ 2 ಹೊತ್ತು 2 ತೊಲೆ ಬಳ್ಳಿತುರಚೆಯ ಮೇಲಿನ ಅಷ್ಟಾವಶೇಷ ಕಷಾಯವಮಾಡಿ ಅದರೊಡನೆ ಹಾಲು ಸಕ್ಕರೆ ಬೆರಸಿ ಸೇವಿಸುತ್ತಿರುವುದರಿಂದ ರಕ್ತಪಿತ್ತ ರೋಗವು ನಿವಾರಣೆಯಾಗುತ್ತದೆ.

**153. ಬದನೇಕಾಯಿ**—ಇದರಲ್ಲಿ ಬಿಳಿ, ನೇರಳೆ ಮತ್ತು ಹಸಿರು ಬಣ್ಣದವು ಚಿಕ್ಕದು, ದೊಡ್ಡದು ಮತ್ತು ತೆಳ್ಳನೆಯ ಉದ್ದ ಜಾತಿಯವು ಹೀಗೆ ಬೇರೆ ಬೇರೆ ಪ್ರಕಾರಗಳುಂಟು. ಆದರೆ ಬಹುತೇಕ ಎಲ್ಲವುಗಳ ಗುಣಧರ್ಮಗಳು ಒಂದೇಆಗಿರುತ್ತದೆ. ಇದು ಅಡಿಗೆಯಲ್ಲಿ ಹೆಚ್ಚಾಗಿ ಉಪಯೋಗವಾದರೂ ಔಷಧಕ್ಕೂ ಬರುತ್ತದೆ. ಇದರ ಬೇರು, ಕಾಯಿ, ಎಲೆ ಎಲ್ಲವುಗಳೂ ಔಷಧದ್ರವ್ಯಗಳಾಗಿರುತ್ತವೆ ಬದನೆಯು ಪಾಚಕವೂ, ದೀಪನವೂ ಆಗಿದ್ದು ಜಠರಾಗ್ನಿಯನ್ನು ವೃದ್ಧಿಗೊಳಿಸುತ್ತದೆ. ಇದು ಉಷ್ಣವೀರ್ಯವುಳ್ಳದ್ದಾಗಿರುವುದರಿಂದ ವಾತ ಮತ್ತು ಶ್ಲೇಷ್ಮರೋಗಗಳ ಮೇಲೆ ಸತ್ಪರಿಣಾಮವನ್ನುಂಟುಮಾಡುತ್ತದೆ. ಆದರೆ ಮೇಹವ್ಯಾಧಿಯವರಿಗೆ ಕೆಡುಕನ್ನುಂಟುಮಾಡುತ್ತದೆ, ಆಹಾರಕ್ಕಾಗಿ ಎಳೆಯ ಬದನೆಯ ಕಾಯಿಯನ್ನು ಉಪಯೋಗಿಸುವುದೊಳ್ಳೆಯದು. ಬಲಿತ ಕಾಯಿಯು ರಕ್ತವನ್ನು ಕೆಡಿಸುತ್ತದೆ; ಎಳೆಯ ಬದನೆಕಾಯಿಯು ಕಣ್ಣಿಗೆ ಹಿತ; ವೀರ್ಯವೃದ್ಧಿಕಾರಿ; ಇದು ತ್ರಿದೋಷನಾಶಕವಾಗಿರುವುದರಿಂದ ಮಿತವಾಗಿ ಎಲ್ಲ ಸಂದರ್ಭಗಳಲ್ಲೂ ಉಪಯೋಗಿಸಬಹುದೆಂದು ವೈದ್ಯರನೇಕರ ಅಭಿಪ್ರಾಯವಿರುತ್ತದೆ.

**154. ಬಡೇಸೋಪು** (ಬಡಾಸೋಪು)—ಇದು ಲಘು, ರೂಕ್ಷ, ಉತ್ತೇಜಕ, ರೋಚಕ, ದೀಪಕ, ಪಾಚಕವಿದ್ದು ಕಿಂಚಿತ್ ವಿರೇಚಕವೂ, ಇರುತ್ತದೆ. ಅಲ್ಲದೆ ಇದು ಮೂತ್ರಲವೂ, ಕಷಾಯವೂ. ವಿಪಾಕದಲ್ಲಿ ಮಧುರವೂ ಆಗಿರುತ್ತದೆ. ಇದರಿಂಗ ಅಜೀರ್ಣ, ಮಲಬದ್ಧತೆ, ಅರುಚಿ, ಕಾಸ, ಉದರಶೂಲೆ, ಕ್ರಿಮಿರೋಗ ದಾಹ ಇವುಗಳು ನಿವಾರಣೆಯಾಗುತ್ತವೆ. ಪಚನಶಕ್ತಿಯು ಹೆಚ್ಚುತ್ತದೆ. ಮುಖ ರೋಗವು ಇದರಿಂದ ನಿವಾರಣೆಯಾಗುತ್ತದೆ. ಅಲ್ಲದೆ ಇದು ವಾತನಾಶಕವೂ ಹೌದು. ಮೂತ್ರ ವಿಕಾರಗಳು ಇದರಿಂದ ಪರಿಹಾರವಾಗುತ್ತವೆ.

**155. ಬಜೆ**—ಇದು ಘಾಟಾಗಿದ್ದು, ಕಹಿಯೂ, ಉಷ್ಣವೂ, ಆಗಿದೆ. ಇದು ನಾಲಗೆಯನ್ನೂ, ಅಗ್ನಿಯನ್ನೂ ಹೆಚ್ಚಿಸುತ್ತದೆ. ಮಲಮೂತ್ರವನ್ನು ಶುದ್ಧಗೊಳಿಸುತ್ತದೆ; ಮಲಬದ್ಧತೆಯನ್ನೂ ನಿವಾರಿಸುತ್ತದೆ. ಶೂಲೆ, ಅಪಸ್ಮಾರ, ಅಸಚನ, ಕಫವಿಕಾರಗಳನ್ನು ಪರಿಹರಿಸುತ್ತದೆ. ಉನ್ಮಾದ, ಕ್ರಿಮಿರೋಗ ವಾತಗಳನ್ನು ನಿವಾರಿಸುತ್ತದೆ. ಇದು ಕ್ಷುದಾಬೋಧಕವೂ, ಸ್ನಾಯುಉದ್ವೇಗಶಾಮಕವೂ, ಚೇತನಕಾರಕವೂ, ಕಾಮೋದ್ದೀಪಕವೂ, ಜನನೇಂದ್ರಿಯೋತ್ತೇಜಕವೂ ಆಗಿರುತ್ತದೆ; ಇದು

ಕಂಠನಾಳದ ಮತ್ತು ಶ್ವಾಸನಾಳಿಕೆಯ ದೋಷವನ್ನು ಪರಿಹರಿಸುತ್ತದೆ. ನಾಲಿಗೆಯ ಜಡತ್ವವನ್ನು ನೀಗಿಸುತ್ತದೆ; ಸ್ಮರಣಶಕ್ತಿಯನ್ನು ಹೆಚ್ಚಿಸುತ್ತದೆ; ಅಲ್ಲದೆ ಶೋಥವನ್ನೂ ವಾತಜ್ವರವನ್ನೂ ಪರಿಹರಿಸುತ್ತದೆ. ಪಚನಕ್ರಿಯೆಯ ಮೇಲೆ ಇದು ಹೆಚ್ಚಿನ ಸತ್ಪರಿಣಾಮವನ್ನುಂಟುಮಾಡುತ್ತದೆ; ಪ್ರಮಾಣ 3–4 ಗುಂಜೆಯಿಂದ 10–12 ಗುಜಿಯವರೆಗೆ ಜೇನಿನಲ್ಲಿ ಅಥವಾ ಬಿಸಿನೀರಿನಲ್ಲಿ ಕೊಡುವ ಕ್ರಮ. ಇದು ಮೃದು ವಮನಕಾರಕ; ಹೆಚ್ಚಿನ ಪ್ರಮಾಣದಲ್ಲಿ ತೆಗೆದುಕೊಂಡರೆ ತೀವ್ರ ವಮನವನ್ನುಂಟುಮಾಡಿಸುತ್ತದೆ.

156. **ಬಸಲೆಬಳ್ಳಿ**—ಬಸಲೆಬಳ್ಳಿಯು ಮಧುರ, ಶೀತವೀರ್ಯ; ಶುಕ್ರ ಜನಕ, ಸ್ತನ್ಯ, ಗ್ರಾಹಿ, ಕಫವಾತಜನಕವಾಗಿದ್ದು, ಉಷ್ಣಸಂಬಂಧಪಟ್ಟವ್ಯಾಧಿ, ರಕ್ತ ವಿಕಾರ, ಕ್ರಿಮಿ ಮತ್ತು ಕುಷ್ಠಗಳನ್ನು ನಾಶಪಡಿಸುತ್ತದೆ. ಅಫೀಮಿನ ಮಾದಕ ಪ್ರಭಾವವನ್ನು ಪರಿಹರಿಸುವ ಅಪೂರ್ವ ಶಕ್ತಿಯು ಇದಕ್ಕಿದೆ. ಇದರ ಎಲೆಯ ಮತ್ತು ದಂಟಿನ ಹುಳಿಯು ಉಷ್ಣವನ್ನೂ ಮತ್ತು ರಕ್ತಾತಿಸಾರವನ್ನೂ ಪರಿಹರಿಸುತ್ತದೆ; ಇದು ಪೌಷ್ಟಿಕವೂ ಹೌದು; ಆದರೆ ವಾತವನ್ನು ವೃದ್ಧಿಪಡಿಸುತ್ತದೆ. ಪ್ರತಿ ದಿನ ಬೆಳಿಗ್ಗೆ ಇದರ ದಂಟನ್ನೂ, ಎಲೆಯನ್ನೂ, ಬೇಯಿಸಿ ಊಟಕ್ಕೆ ಮೊದಲು ತಿನ್ನುವುದರಿಂದ ಸ್ತ್ರೀಯರ ದೈಹಿಕ ನಿಶ್ಶಕ್ತಿಯು ದೂರವಾಗುತ್ತದೆ. ಇದರ ಎಲೆಗಳನ್ನರೆದುಹಚ್ಚಿದರೆ ಕುರ, ಕುರುಂಡ ಸಂಕದಾಳ; ಸುಟ್ಟಗಾಯಗಳು ಪರಿಹಾರವಾಗುತ್ತದೆ ಮೈಗೆ ಲೇಪಿಸಿದರೆ ಪಿತ್ತದ ಗಂದೆ ನಿವಾರಣೆ, ತಲೆಗೆ ಲೇಪಿಸಿದರೆ ಅನಿದ್ರೆ ನೀಗುತ್ತದೆ ಮತ್ತು ಉರಿಗುಣವಾಗುತ್ತದೆ. ಇದರ ರಸ 1 ಔನ್ಸ್‌ನಿಂದ 2 ಔನ್ಸ್‌ನವರೆಗೆ ನಿತ್ಯ ಸೇವಿಸಿದರೆ ಉರಿಮೂತ್ರ, ಮೂತ್ರದ ಅಡಚಣೆ, ಮಲಬದ್ಧತೆ, ರಕ್ತದೊತ್ತಡ, ಒಣ ಕೆಮ್ಮು, ರಕ್ತಪಿತ್ತ ಹೊಟ್ಟೆಉರಿ, ಶುಕ್ರದೌರ್ಬಲ್ಯಗಳು ಪರಿಹಾರವಾಗುತ್ತವೆ; ರಕ್ತಸ್ರಾವದಲ್ಲಿ ಮಜ್ಜಿಗೆಯೊಡನೆ, ಅತಿಸಾರದಲ್ಲಿ ಮೊಸರು ದಾಳಿಂಬೆ ಮತ್ತು ತುಪ್ಪದೊಡನೆ ಸೇವಿಸಬೇಕು,

157. **ಬಾಳೆ**—ಇದು ಗುರುವೂ, ಸ್ನಿಗ್ಧವೂ, ಮಧುರವೂ, ಕಷಾಯವೂ, ವಿಪಾಕದಲ್ಲಿ ಮಧುರವೇ ಇದ್ದು ಶೀತವೀರ್ಯವುಳ್ಳದ್ದಾಗಿರುತ್ತದೆ; ಇದು ವಾತ ಪಿತ್ತಶಾಮಕವೂ; ಗ್ರಾಹಿಯೂ, ರೋಚಕವೂ, ವಿಷ್ಟಂಭಿಯೂ, ಕಫಕಾರಕವೂ, ವೇದನಾಸ್ಥಾಪನವೂ, ಮೇಧ್ಯವೂ(ಮೇದಸ್ಸನ್ನು ಬೆಳೆಸುವಂತಹುದು), ಕಫ ನಿಸ್ಸಾರಕವೂ, ವೃಷ್ಯವೂ, ಬಲ್ಯವೂ, ಬೃಂಹಣವೂ, ವಿಷಘ್ನವೂ, ಯೋನಿಸ್ರಾವ ರೋಧಕವೂ, ಇದ್ದು ತೃಷ್ಣಾ, ದಾಹ, ರಕ್ತಪಿತ್ತ, ಶುಷ್ಕಕಾಸ, ಗಲಕ್ಷತ, ಅಶ್ಮರಿ, ಯೋನಿದೋಷಗಳನ್ನು ನಿವಾರಿಸಿ ಬಸ್ತಿಯ ಉತ್ತೇಜನೋಚನ್ಯ ರೋಗಗಳನ್ನು ಪರಿಹರಿಸುತ್ತದೆ. ಮರದಿಂದ ಕಡಿದು ತಂದು ಇಟ್ಟು ಹಣ್ಣು ಮಾಡುವುದಕ್ಕಿಂತಲೂ

ಮರದಲ್ಲೇ ಪಣ್ಣಾಗಿರುವುದು ಬಹುಶ್ರೇಷ್ಠ; ಇಂತಹ ಹಣ್ಣುಗಳಲ್ಲಿ ಮಾತ್ರ ಮೇಲೆ ಹೇಳಿದ ಗುಣಗಳಿರುತ್ತವೆ. ಅರ್ಧ ಬಲಿತ ಹಣ್ಣಿನಲ್ಲಿ ಅಷ್ಟೊಂದು ಗುಣವಿರುವುದಿಲ್ಲ ಬಾಳೆಯಲ್ಲಿ ರಸಬಾಳೆ, ಏಲಕ್ಕಿಬಾಳೆ, ಪುಟ್ಟಬಾಳೆ, ಪಚ್ಚಬಾಳೆ, ಕಲ್ಲುಬಾಳೆ, ಕಲ್ಯಾಣಬಾಳೆ, ಕಾಡುಬಾಳೆಗಳೇ ಮೊದಲಾದ ಅನೇಕ ಜಾತಿಗಳುಂಟು. ಆದರೆ ರಾಸಾಯನಿಕ ಸಂಘಟನೆಯಲ್ಲಿ ಸ್ವಲ್ಪ ಹೆಚ್ಚುಕಡಿಮೆ ಎಲ್ಲವುಗಳ ಗುಣವೂ ಒಂದೇ. ಬಾಳೆಯ ಗಡ್ಡೆ, ಎಲೆ, ದಿಂಡು, ಪಟ್ಟೆ, ಹೂವು, ಹಣ್ಣು ಹೀಗೆ ಪ್ರತಿಯೊಂದೂ ರೋಗಚಿಕಿತ್ಸೆಯಲ್ಲಿ ಉಪಯೋಗವಾಗುತ್ತವೆ. ರೋಗದ ಯುಕ್ತಾಯುಕ್ತತೆಯನ್ನರಿತು ಪ್ರಮಾಣವನ್ನು, ಅನುಪಾನವನ್ನು ಯೋಜಿಸಬೇಕು.

158. **ಬಾಲಮೆಣಸು** (ತಕ್ಕೋಲ)—ಇದು ಲಘುವೂ, ರೂಕ್ಷವೂ, ತೀಕ್ಷ್ಣವೂ, ಉತ್ತೇಜಕವೂ, ರೋಚನವೂ, ದೀಪನವೂ, ಪಾಚನವೂ, ಅನುಲೋಮನವೂ, ಹೃದ್ಯವೂ, ಮೂತ್ರಲವೂ; ವೃಷ್ಯವೂ, ಇದ್ದು ರಸದಲ್ಲಿ ಕಹಿಯೂ (ಕಟು), ತಿಕ್ತವೂ, ವಿಪಾಕದಲ್ಲೂ ಕಟುವೂ, ಮತ್ತು ಉಷ್ಣವೀರ್ಯವುಳ್ಳದ್ದೂ ಆಗಿರುತ್ತದೆ. ಅಲ್ಲದೆ ಇದು ಕಫವಾತಶಾಮಕವೂ, ತೃಷ್ಣಾಶಾಮಕವೂ, ಆರ್ತವ ಜನನವೂ, ಶ್ಲೇಷ್ಮ ನಿಸ್ಸಾರಕವೂ ಇದ್ದು ಆಧ್ಮಾನವನ್ನು, ಜಡತೆಯನ್ನೂ ಮತ್ತು ಮುಖದುರ್ಗಂಧವನ್ನೂ ನಾಶಮಾಡುತ್ತದೆ. ಇದು ಕಫವಾತಶಾಮಕವಾಗಿರುವುದರಿಂದ ಬಹುತೇಕ ಕಫವಾತಜನ್ಯ ರೋಗಗಳ ಮೇಲೆಲ್ಲ ಕೆಲಸಮಾಡುತ್ತದೆ. ಅಗ್ನಿಮಾಂದ್ಯ, ಅರುಚಿ, ವಿಷ್ಟಂಭ, ಹೃದಯದೌರ್ಬಲ್ಯ, ಸ್ವರಭಂಗ, ಕಾಸ,ಶ್ವಾಸ ಕಷ್ಟಾರ್ತವ, ರಜೋರೋಧ,ಅತಿಸಾರ, ಅರ್ಶ–(ಮೂಲವ್ಯಾಧಿ)ಧ್ವಜಭಂಗ,ಬಾವು ಶುಕ್ರಮೇಹ, ಶ್ವೇತಪ್ರದರ, ಮುಖಪಾಕ ಮೊದಲಾದವುಗಳನ್ನು ನಿವಾರಿಸುವುದರಲ್ಲಿ ಪ್ರಯೋಜನಕಾರಿಯಾಗಿರುತ್ತದೆ. ಆದರೆ ಇದರಲ್ಲಿ ಒಂದು ಬಗೆಯ ತೈಲವಿರುವುದರಿಂದ ಇದನ್ನು ಕಷಾಯ, ಕ್ವಾಥರೂಪಗಳಲ್ಲಿ ಕೊಡಲುನಿಯೋಜಿಸಿದರೆ ಅದರಲ್ಲಿಯ ತೈಲವು ಆವಿಯಾಗಿ ಹೋಗುತ್ತದೆ. ಆದುದರಿಂದ ಇದನ್ನು ಚೂರ್ಣ, ಕಲ್ಕ,ಫಾಂಟ ಮತ್ತು ವಟಿಕಾರೂಪಗಳಲ್ಲಿ ಕೊಡುವುದು ಹಿತಕರ. ಪ್ರಮಾಣ 15 ರಿಂದ 30 ಗುಂಜಿ ತೂಕದವರೆಗೆ ಕೊಡಲು ಹೇಳಿದೆ.

159 **ಬಿಲ್ವಪತ್ರೆ**–ಬಿಲ್ವದ ಬೇರು ತ್ರಿದೋಷಘ್ನವೂ, ಮಧುರವೂ, ಲಘುವೂ, ಛರ್ದಿಹರವೂ ಆಗಿರುತ್ತದೆ. ಅದರ ಕಾಯಿಯು ಸ್ನಿಗ್ಧವೂ, ಸಂಗ್ರಾಹಿಯ ದೀಪನವೂ, ಆಗಿದ್ದು, ಕಟುತಿಕ್ತವೂ, ಉಷ್ಣವೀರ್ಯವೂ ಇರುತ್ತದೆ ಮತ್ತು ಇದರಿಂದ ವಾತ ಮತ್ತು ಕಫಗಳ ನಿವಾರಣೆಯಾಗುತ್ತದೆ. ಆದರೆ ಇದರ ಹಣ್ಣಿನತಿರುಳು ಮಧುರವೂ ಮತ್ತು ಗುರುವೂ ಆಗಿದ್ದು ಪಿತ್ತಘ್ನವೂ ಮತ್ತು ವಾತಘ್ನವೂ ಕೂಡ ಆಗಿರುತ್ತದೆ. ಇದರಲ್ಲಿ ದೀಪನ ಗುಣವಿರುವುದರಿಂದ ಇದು ಸಂಗ್ರಹಣೆಯನ್ನು ಗುಣಪಡಿಸುತ್ತದೆ, ಅಲ್ಲದೆ

ಇವರ ಎಲೆಯು ದೀಪನವೂ, ಪಾಚನವೂ, ಸ್ನಿಗ್ಧವೂ, ಗುರುವೂ, ಆಗಿದ್ದು ಸಕಲ ವಾತಗಳನ್ನು, ಕಫದೋಷಗಳನ್ನು ಕೂಡ ಪರಿಹರಿಸುತ್ತದೆ. ಅಲ್ಲದೆ ಇದರ ಹೂವು ಅತಿಸಾರವನ್ನು, ವಮನವನ್ನು ಮತ್ತು ತೃಷೆಯನ್ನು ನೀಗಿಸುತ್ತದೆ; ತೈಲವಾದರೋ ವಾತಹರವಾಗಿದೆ. ಅಲ್ಲದೆ ಇದು ಹೃದ್ಯವೂ, ರುಚಿಕರವೂ, ಇದ್ದು ಆಮವಾತನಾಶಕ ವಾಗಿದೆ. ಇದರ ಒಣಗಿಸಿಟ್ಟ ಹಣ್ಣಿನ ತಿರುಳೂಕೂಡ ಆರೋಗ್ಯದಾಯಕವಾಗಿಯೇ ಇದೆ. ಹೀಗೆ ಬಿಲ್ವದ ಪ್ರತಿಯೊಂದು ಭಾಗವು ಔಷಧ ದ್ರವ್ಯವಾಗಿಯೇ ಇದ್ದು ಒಂದಕ್ಕಿಂತಲೂ ಒಂದು ಉತ್ತರೋತ್ತರವಾಗಿ ರೋಗನಾಶಕವೂ, ಶಕ್ತಿದಾಯಕವೂ, ಮತ್ತು ಆರೋಗ್ಯಕಾರಕವಾಗಿಯೂ ಇರುತ್ತದೆ. ಬಿಲ್ವಪತ್ರೆಯರಸವು ಮಧುಮೇಹಕ್ಕೆ ಪ್ರಯೋಜನಕಾರಿಯಾಗಿದೆ. ಹಣ್ಣಿನ ಷರಬತ್ತು ಕ್ಷುಧಾ ಪರಿಹಾರಕವಾಗಿದೆ ಮತ್ತಿದು ಕರುಳಿನ ರೋಗವನ್ನು ಪರಿಹರಿಸುತ್ತದೆ. ಹಳೆಯ ಅತಿಸಾರ ಮತ್ತು ಆಮಶಂಕೆಯಲ್ಲಿ ಬಿಲ್ವದ ಹಣ್ಣು ವಿಶೇಷಗುಣಕಾರಿ.

160. **ಬಿಳೇತಿಗಡೆ**—ಇದರ ಬೇರು ಔಷಧದ್ರವ್ಯವಾಗಿದೆ; ಆದರೆ ಇದನ್ನು ಹಸುವಿನ ಹಾಲಿನಲ್ಲಿ ಬೇಯಿಸಿ ಶುದ್ಧಿಮಾಡಿಯೇ ಔಷಧಕ್ಕೆ ಬಳಸಬೇಕು. ಇದರಲ್ಲಿ ಬಿಳಿಯ ಮತ್ತು ಕರಿಯ ಎರಡು ಜಾತಿಗಳುಂಟು. ಔಷಧಕ್ಕೆ ಬಿಳಿಯದು ಶ್ರೇಷ್ಠ ತಿಗಡೆಯಲ್ಲಿ ವಿರೇಚನಗುಣವಿರುವುದರಿಂದ ಅಲ್ಪ ಪ್ರಮಾಣದಲ್ಲಿಯೇ ಬಳಸುವುದು ಅಗತ್ಯ. ಅಲ್ಲವಾದರೆ ಅಪಾಯ ಉಂಟಾಗುವ ಸಂಭವವಿದೆ; ಇದರ ಕಾಂಡ, ತ್ವಕ್ಕು ಕಡ್ಡಿಗಳಲ್ಲೂ ತಕ್ಕಮಟ್ಟಿಗೆ ಬೇರಿನ ಗುಣವೇ ಇದ್ದರೂ ಔಷಧಗಳಲ್ಲಿ ಬೇರನ್ನೇ ಉಪಯೋಗಿಸಬೇಕೆಂಬ ನಿಯಮವಿದೆ.

161. **ಬಿದಿರು**—ಬಿದಿರು ಶೀತಲವೂ, ವಿಪಾಕದಲ್ಲಿ ಕಟುವೂ, ರೂಕ್ಷವೂ, ಗುರುವೂ, ಕಷಾಯವೂ ಆಗಿದ್ದು ಕರುಳಿನ ರೋಗವನ್ನು ಪರಿಹರಿಸುತ್ತದೆ ಮತ್ತು ಇದು ಕಫಘ್ನವೂ, ಪಿತ್ತಘ್ನವೂ ಆಗಿದ್ದು ಕುಷ್ಠವನ್ನೂ, ಅತಿಸಾರವನ್ನೂ ನೀಗುತ್ತದೆ; ಇದರಿಂದ ಶೋಥ ಮತ್ತು ಕಫವಿಕಾರಗಳೆಲ್ಲ ಪರಿಹಾರವಾಗುತ್ತವೆ; ಮೂತ್ರದ ತಡೆಯು ನಿವಾರಣೆಯಾಗುತ್ತದೆ; ಮೂತ್ರಕೃಚ್ಛ್ರವು ಪರಿಹಾರವಾಗುತ್ತದೆ. ಪ್ರಮೇಹ, ಮೂಲವ್ಯಾಧಿ, ಪಿತ್ತ, ತೃಷೆ, ದಾಹ, ಮತ್ತು ವಾತಗಳ ಮೇಲೂ ಬಿದಿರು ಸತ್ಪರಿಣಾಮವನ್ನುಂಟುಮಾಡುತ್ತದೆ. ಇದು ಶಾಮಕವೂ ಶೀತಲವೂ, ಆಗಿರುವುದರಿಂದ ಒಣಕೆಮ್ಮನ್ನು ಪರಿಹರಿಸುವುದರಲ್ಲಿ ಉತ್ತಮ ಔಷಧದ್ರವ್ಯವಾಗಿದೆ

162. **ಬಿದಿರುಪ್ಪು**—ಇದು ಬಿದಿರಿನಿಂದಲೇ ಉತ್ಪನ್ನವಾಗುವ ಒಂದು ಔಷಧದ್ರವ್ಯ; ಬಹು ಸೌಮ್ಯ; ಬಿದರಿನ ಎಲ್ಲ ಗುಣಧರ್ಮಗಳೂ ಇದರಲ್ಲಿರುತ್ತವೆ; ಆದುದರಿಂದ ಅದರ ಕೆಲಸವನ್ನೇ ಇನ್ನೂ ಉತ್ತಮವಾಗಿಮಾಡುತ್ತದೆ.

**163. ಬೆಳ್ಳುಳ್ಳಿ**—ಬೆಳ್ಳುಳ್ಳಿಯು ಉಷ್ಣವೀರ್ಯವುಳ್ಳದ್ದೂ, ಖಾರವೂ, ಪಿಚ್ಛಿಲವೂ, ಸ್ನಿಗ್ಧವೂ, ಸ್ವಾದಿಷ್ಟವೂ, ಬಲಕಾರಕವೂ, ವೀರ್ಯವರ್ಧಕವೂ, ಮೇಧೋಜನಕವೂ, ಪಾಚಕವೂ, ಸಾರಕವೂ, ರಸ ಮತ್ತು ಪಾಕದಲ್ಲಿ ಖಾರವೂ, ತೀಕ್ಷ್ಣವೂ, ಮಧುರವೂ, ಭಗ್ನಸಂಧಾನಕಾರಕವೂ, ಸ್ವರದ ಮೇಲೆ ಸತ್ಪರಿಣಾಮವನ್ನುಂಟುಮಾಡುವಂತಹುದೂ, ಶರೀರದವರ್ಣವನ್ನು ಸುಂದರಗೊಳಿಸುವಂತಹುದೂ ನೇತ್ರ, ಕಂಠ ಮತ್ತು ಕೂದಲಿಗೆ ಹಿತಕಾರಕವೂ, ರಸಾಯನವೂ, ರಕ್ತಪಿತ್ತವನ್ನು ಹೆಚ್ಚಿಸುವಂತಹುದೂ ಮತ್ತು ಹೃದಯ ರೋಗವನ್ನೂ, ಜೀರ್ಣಜ್ವರವನ್ನೂ, ಕುಕ್ಷಿಶೂಲೆಯನ್ನೂ, ವಿಬಂಧವನ್ನೂ, ಅರುಚಿ, ಕೆಮ್ಮು, ಬಾವು, ಮೂಲವ್ಯಾಧಿ, ಕ್ರಿಮಿ, ವಾತ, ಶ್ವಾಸ, ಕಾಸ, ಪ್ರಮೇಹ, ಶೂಲೆ ಮತ್ತು ಶರೀರದಲ್ಲಿಯ ಪ್ರತಿಯೊಂದು ಪ್ರಕುಪಿತವಾಯುವನ್ನೂ ಶಮನಗೊಳಿಸಿ ಜ್ವರವ್ಯಾಧಿಗಳನ್ನು ಪರಿಹರಿಸುವಂತಹುದೂ ಆಗಿದೆ. ಬೆಳ್ಳುಳ್ಳಿಯಲ್ಲಿ ಐದು ರಸಗಳಿದ್ದು ಒಂದು ರಸವು ಮಾತ್ರ ಕಡಿಮೆಯಾಗಿರುವುದರಿಂದ ಇದಕ್ಕೆ ರಸೋನ (ಒಂದು ರಸ ಊನ) ಎಂಬ ಹೆಸರು ಬಂದಿದೆ. ಇದರ ಬೇರಿನಲ್ಲಿ ಕಾರ (ಖಾರ) ರಸವೂ, ದಂಟಿನಲ್ಲಿ ಕಹಿರಸವೂ; ನಾಳದಲ್ಲಿ ಒಗರು ರಸವೂ, ನಾಳದ ಅಗ್ರಭಾಗದಲ್ಲಿ ಲವಣ ರಸವೂ, ಮತ್ತು ಬೀಜದಲ್ಲಿ ಮಧುರರಸವೂ ಇರುತ್ತದೆ. ಬೆಳ್ಳುಳ್ಳಿಯನ್ನು ವಿಶೇಷವಾಗಿ ತಿನ್ನುವವರಿಗೆ ಮದ್ಯಮಾಂಸಾದಿಗಳೂ, ಅಮ್ಲಪದಾರ್ಥಗಳೂ ಹಿತಕರವಾಗಿರುತ್ತವೆ. ಆದರೆ ಮಿತಿಮೀರಿದ ವ್ಯಾಯಾಮವೂ, ಬಿಸಿಲಿನಲ್ಲಿ ಸಂಚರಿಸುವುದೂ, ಹಾಲು ಮತ್ತು ಬೆಲ್ಲಗಳು ಒಳ್ಳೆಯವಲ್ಲ. ಇದರ ಲೇಪನವು ಚರ್ಮವನ್ನು ಸುಡುತ್ತದೆ. ಒಟ್ಟಿನಿಂದ ಶರೀರ ಸ್ವಾಸ್ಥ್ಯದ ದೃಷ್ಟಿಯಿಂದ ಬೆಳ್ಳುಳ್ಳಿಯು ಔಷಧದ್ರವ್ಯವಾಗಿದೆ.

**194. ಬೆಂಡೆಕಾಯಿ**—ಬೆಂಡೆಯಕಾಯಿಯು ಗುರುವೂ (ಜಡ), ಮಧುರವೂ ಶೀತವೀರ್ಯವುಳ್ಳದ್ದೂ ಆಗಿದ್ದು ಪಿಚ್ಛಿಲವೂ, ಮಲಬದ್ಧಕವೂ, ಆಗಿರುತ್ತದೆ. ಇದು ಉಷ್ಣಪ್ರಕೃತಿಯವರಿಗೆ ಪಥ್ಯವೂ, ಶೀತಪ್ರಕೃತಿಯವರಿಗೆ ಅಪಥ್ಯವೂ ಆಗಿದೆ: ಅಂದರೆ ಇದು ಶ್ಲೇಷ್ಮ ಸಂಬಂಧವಾದ ರೋಗಗಳನ್ನು ಹೆಚ್ಚಿಸಿದರೆ ಉಷ್ಣಸಂಬಂಧವಾದ ರೋಗಗಳನ್ನು ಶಮನಗೊಳಿಸುತ್ತದೆ. ಇದರಿಂದ ಪೀನಸ, ಆರ್ತವದೋಷ, ಮೇಹ ಜಾಡ್ಯಗಳು ನಿವಾರಣೆಯಾಗುತ್ತವೆ. ಇದರ ಬೇರು ಕೂಡ ಔಷಧ ದ್ರವ್ಯವಾಗಿದೆ. ಬೇಯಿಸಿದ್ದಕ್ಕಿಂತ ಎಳೆಯ ಹಸಿಕಾಯಿಯಲ್ಲಿ ಜೀವಸತ್ವವು ಹೆಚ್ಚಾಗಿದ್ದು ಇದು ವೀರ್ಯವರ್ಧಕವಾಗಿರುತ್ತದೆ.

**165. ಬೇವು**—ಇದು ಲಘುವೂ, ತಿಕ್ತವೂ, ವಿಪಾಕದಲ್ಲಿ ಕಟುವೂ, ರೋಚನವೂ, ಗ್ರಾಹಿಯೂ, ಅಮ್ಲಪಾಚಕವೂ, ಕಫಪಿತ್ತಶಾಮಕವೂ, ಯಕೃದುತ್ತೇಜಕವೂ ರಕ್ತಶೋಧಕವೂ, ಕ್ರಿಮಿಘ್ನವೂ, ಹೃದ್ಯವೂ, ರಕ್ತವಿಕಾರಜನ್ಯಶೋಥಹರವೂ, ಕಟುಪೌಷ್ಟಿಕವೂ, ಬಲ್ಯವೂ, ಜ್ವರಘ್ನವೂ,

ನಿಯತಕಾಲಿಕ ಜ್ವರಪರಿಹಾರಕವೂ (ಕ್ಲುಪ್ತಕಾಲಕ್ಕೆ ಸರಿಯಾಗಿ ಬರುವ ಜ್ವರ), ವಿವಿಧ ರಕ್ತವಿಕಾರ, ಉಪದಂಶ, ಶೋಫ, ಕುಷ್ಠ, ಪ್ರಮೇಹ, ದಾಹ, ವಮನ, ವ್ರಣ, ಮತ್ತು ಮಧುಮೇಹಜನ್ಯ ವ್ರಣಪರಿಹಾರಕವೂ ಆಗಿದೆ; ಇದು ಶೀತ ವೀರ್ಯವೆಂದು ಕೆಲವರ ಅಭಿಪ್ರಾಯವಾದರೆ ಸುಶ್ರುತರು ಇದನ್ನು ಉಷ್ಣವೀರ್ಯ ವೆಂದಿದ್ದಾರೆ. ಆಚಾರ್ಯವರ್ಗದಲ್ಲೇ ಈ ಭಿನ್ನಾಭಿಪ್ರಾಯವೇ? ಎಂದು ನಾವಾನ್ಯ ಜನರಿಗೆ ತೋರಿದರೂ ಅಲ್ಲಿ ಅಭಿಪ್ರಾಯ ಭೇದವಿಲ್ಲವೆಂದೇ ತಿಳಿಯ ಬೇಕು. ಪ್ರಾರಂಭದಲ್ಲಿ ಇದುಶೀತವೀರ್ಯವೇ ಹೌದು;ಆದರೆ ಪರಿಣಾಮದಲ್ಲಿ ಉಷ್ಣವೇ ಎಂದು ಅನುಭವದಲ್ಲೂ ಕಂಡುಬಂದಿದೆ; ಅಲ್ಪ ಪ್ರಮಾಣದಲ್ಲಿ ಸೇವಿಸಿದರೆ ಇದು ವಾಕರಿಕೆಯನ್ನು ನಿಲ್ಲಿಸುತ್ತದೆ; ಆದರೆ ಪ್ರಮಾಣ ಹೆಚ್ಚಿದಾಗ ವಾಕರಿಕೆಯನ್ನುಂಟುಮಾಡುತ್ತದೆ. ಹೀಗೆ ವಸ್ತುಗಳ ಗುಣಧರ್ಮಗಳನ್ನು ಅರಿಯುವಾಗ ಕೇವಲ ಶಾಸ್ತ್ರದ ಶಬ್ದಶಃ ಅರ್ಥಕ್ಕೆ ಗಮನ ಕೊಡದೆ ಅನುಭವದ ಒರೆಗಲ್ಲಿಗೂ ಹಾಕಿ ಹಿಕ್ಕಿ ನೋಡುವುದೂ ಅತ್ಯವಶ್ಯಕವೆಂಬುದನ್ನು ಮರೆಯಲಾಗದು. ಬೇವಿನಲ್ಲಿ ಅರಬೇವು ಅಥವಾ ಹೆಬ್ಬೇವು ಎಂಬ ಬೇರೆ ಜಾತಿಯುಂಟು; ಅದು ಇಲ್ಲೆಲ್ಲಿ ಕಾಣಸಿಗುವ ಕಹಿಬೇವಿನಷ್ಟು ಕಹಿಯಾಗಿರುವುದಿಲ್ಲ. ಆದಕ್ಕೀಂತಲೂ ಇಲ್ಲೆಲ್ಲಿ ಸಾಮಾನ್ಯವಾಗಿ ದೊರೆಯುವ ಬೇವಿನ ಮರವೇ ಔಷಧ ಯೋಗ್ಯವಾಗಿದೆ. ಬೇವಿನ ಬೇರು, ತೊಗಟೆ, ಎಲೆ, ಕಾಯಿ, (ಪಂಚಾಂಗವೂ) ಈ ಐದು ಔಷಧ ದ್ರವ್ಯವಾಗಿವೆ. ಬೇವನ್ನು ಸ್ವರಸ, ಕ್ವಾಥ, ಕಷಾಯ, ಚೂರ್ಣ, ತೈಲಗಳ ರೂಪಗಳಲ್ಲಿ ಔಷಧವಲ್ಲಿ ಉಪಯೋಗಿಸುವ ಕ್ರಮವಿದೆ. ಯೋಗ್ಯ ಅನುಪಾನದಲ್ಲಿ ವಯೋಮಾನಕ್ಕೆ ತಕ್ಕಂತೆ ಕೊಡುವುದರಿಂದ ಮೇಲೆ ಉದಹರಿಸಿರುವ ರೋಗಗಳೆಲ್ಲ ಪರಿಹಾರವಾಗುತ್ತವೆ. ಬೇವಿನ ಎಲೆಯನ್ನು ಪ್ರತಿದಿನ ಒಂದರಂತೆ ಪ್ರಾರಂಭಿಸಿ ಒಂದು ಓಡಿಯಷ್ಟನ್ನು ನಿತ್ಯ ಸೇವಿಸುತ್ತಿದ್ದರೆ ಅಂತಹವರು ದೀರ್ಘಕಾಲ ಆರೋಗ್ಯವಂತರಾಗಿಯೇ ಬಾಳುತ್ತಾರೆಂಬೊಂದು ಪ್ರತೀತಿ ಇದೆ.

**166.** ಬೇಲದಹಣ್ಣು—ಇದು ಲಘು, ರೂಕ್ಷ, ಕಷಾಯ, ಮಧುರ, ವಿಪಾಕದಲ್ಲಿ ಕಟು ಮತ್ತು ಶೀತವೀರ್ಯವಾಗಿದ್ದು ಇದು ವಾತಪಿತ್ತಶಾಮಕವೂ ರೋಚಕವೂ, ಲೇಖನವೂ, ರಕ್ತಶೋಧಕವೂ, ಆಗಿದೆ. ಇದರಿಂದ ತೃಷ್ಣಾ, ಶೋಫ, ಅತಿಸಾರ, ಪ್ರವಾಹಿಕಾ, ವಿಷ ಮೊದಲಾದವುಗಳ ನಿವಾರಣೆಯಾಗುತ್ತವೆ. ಇದರ ಕಾಯಿಯು ಒಗರೂ ಅಕಂಠ್ಯವೂ (ಸ್ವರವನ್ನು ಕೆಡಿಸುವಂತಹುದು), ರೋಚಕವೂ, ಕಫನಾಶಕವೂ, ಲೇಖನವೂ, ರೂಕ್ಷವೂ, ಲಘುವೂ, ಗ್ರಾಹಿಯೂ, ವಾತಕಾರಕವೂ, ಮತ್ತು ವಿಷಹರವೂ ಆಗಿರುತ್ತದೆ. ರಕ್ತಾತಿಸಾರ ಮತ್ತು ಆಮಾತಿಸಾರದಲ್ಲಿ ಇದು ಅಂತ್ರಾಶಯವನ್ನು ಸಂಕೋಚನಗೊಳಿಸುತ್ತದೆ. ಕೆಲ ಕೆಲವರಿಗೆ

ಚೆನ್ನಾಗಿ ಬಲಿಯದ ಇದರ ಕಾಯಿಯು ಕೆಟ್ಟದನ್ನು ಮಾಡುತ್ತದೆ. ಆದ್ದರಿಂದ ಚೆನ್ನಾಗಿ ಬಲಿತ ಸುಗಂಧಿತವಾದ ಹಣ್ಣನ್ನೇ ಉಪಯೋಗಿಸಬೇಕು. ಇದು ಬಿಕ್ಕಳಿಕೆ, ವಾಕರಿಕೆಗಳನ್ನು ಪರಿಹರಿಸುತ್ತದೆ. ಇದರ ರಸ 1 ರಿಂದ 5 ತೊಲೆಯವರೆಗೆ ಹಿಪ್ಪಲಿಯ ಚೂರ್ಣ ಮತ್ತು ಜೇನಿನ ಅನುಪಾನದಲ್ಲಿ ಕೊಡಬೇಕು; ಬೇಲದ ಹಣ್ಣು, ಬಲಿತಕಾಯಿ, ಎಲೆ, ತ್ವಕ್ಕು, ವಾಟೆಗಳೆಲ್ಲವೂ, ಔಷಧದ್ರವ್ಯಗಳಾಗಿರುತ್ತವೆ. ತ್ವಕ್ಕಿನ ಚೂರ್ಣ ಅರ್ಧದಿಂದ 1 ತೊಲೆಯವರೆಗೆ ಎಲೆಯ ಚೂರ್ಣ 1 ರಿಂದ 2 ತೊಲೆಯವರೆಗೆ ಮತ್ತು ಕ್ವಾಥ ಅಥವಾ ಕಷಾಯ 5 ರಿಂದ 10 ತೊಲೆಯವರೆಗೆ ಸ್ವರಸ 2–4 ತೊಲೆಯನ್ನು ಯುಕ್ತ ಅನುಪಾನದಲ್ಲಿ ಕೊಡಬೇಕು.

**167. ಮತ್ತೀಮರ**–(ಅರ್ಜುನ)ಇದು ಒಗರುರಸವುಳ್ಳದ್ದು, ಶೀತವೀರ್ಯವಿರುವುದೂ ಆಗಿದ್ದು ಹೃದಯಕ್ಕೆ ಹಿತಕರವೂ, ರಕ್ತಸ್ತಂಭಕವೂ, ವ್ರಣಶೋಧಕವೂ ದಣಿವು ಮತ್ತು ಬಾಯಾರಿಕೆ ನಿವಾರಕವೂ, ಕಾಂತಿಜನಕವೂ, ಬಲಕಾರಕವೂ. ವಾತ ಪ್ರಕೋಪವೂ ಆಗಿರುತ್ತದೆ. ಕ್ಷತಕ್ಷಯ, ವಿಷ, ರಕ್ತವಿಕಾರ, ಮೇದೋವೃದ್ಧಿ, ಪ್ರಮೇಹ, ಪ್ರಮೇಹಪಿಟಿಕಾ, ಭಸ್ಮಕರೋಗ, ಮೂತ್ರಕೃಚ್ಛ್ರ, ಅಸ್ಥಿಸಂಹಾರ, ಪಾಂಡು, ಕಫಪಿತ್ತ ಮೊದಲಾದುವುಗಳನ್ನು ನಿವಾರಿಸುತ್ತದೆ. ಅರ್ಜುನವೃಕ್ಷದ ತೊಗಟೆ, ಎಲೆ, ಬೇರುಗಳೆಲ್ಲವೂ ಔಷಧಕ್ಕೆ ಬರುತ್ತವೆ. ಅರ್ಜುನದ ಪ್ರಯೋಗವು ಹೃದಯದ ಮೇಲೆ ಅತಿ ಶ್ರೇಷ್ಠವಾದ ಕೆಲಸವನ್ನು ಮಾಡುತ್ತದೆ.

**168. ಮಧುನಾಶಿನಿ**—ಇದು ಲಘುವೂ, ರೂಕ್ಷವೂ, ಕಷಾಯವೂ, ಕಟುವೂ, ವಿಪಾಕದಲ್ಲೂ ಕಟುವೇ ಇದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಇದು ಕಫವಾತ ಶಾಮಕ, ದೀಪನ. ಗ್ರಾಹಿ. ಯಕೃತ್, ಹೃದಯ ಮತ್ತು ಗರ್ಭಾಶಯದ ಉತ್ತೇಜಕ, ಕಫಘ್ನ, ಮೂತ್ರಲ, ವಿಷಮಜ್ವರಘ್ನ ಮತ್ತು ಕಟುಪೌಷ್ಟಿಕವಾಗಿದ್ದು ವಿಷಘ್ನವಾಗಿದೆ; ಅಲ್ಲದೆ ಇದು ಅಶ್ಮರಿ, ಹೃದ್ರೋಗ, ಅರ್ಶ, ದಾಹ; ಕಾಮಾಲಾ ಮತ್ತು ನೇತ್ರರೋಗಗಳ ನಾಶಕವಾಗಿರುತ್ತದೆ. ಆದರೆ ಅಧಿಕ ಪ್ರಮಾಣದಲ್ಲಿ ಸೇವಿಸಿದರೆ ವಾಕರಿಕೆಯುಂಟಾಗುತ್ತದೆ. ಈ ವನೌಷಧಿಯ ಉಲ್ಲೇಖವು ಪ್ರಾಚೀನ ಆಯುರ್ವೇದ ಗ್ರಂಥಗಳಲ್ಲಿ ಎಲ್ಲೂ ಕಾಣುವುದಿಲ್ಲ. ಇದು ಮಧುಮೇಹ ಮತ್ತು ಇಕ್ಷುಮೇಹಾದಿಗಳ ಮೇಲೆ ಬಹು ಸತ್ಪರಿಣಾಮವನ್ನುಂಟುಮಾಡುತ್ತದೆಂದು ಈಚಿನ ಸಂಶೋಧನೆಯಿಂದ ತಿಳಿದು ಬಂದಿದೆ.

**169, ಮಜ್ಜಿಗೆಹುಲ್ಲು**—ಇದು ವಿಕಾಸಿಯೂ, ಶ್ವಾಸಹರವೂ, ದೀಪನೀಯವೂ, ವಾತಶಾಮಕವೂ, ಆಧ್ಮಾನಹರವೂ, ಅಂತ್ರಪೀಡಾಶಾಮಕವೂ, ತೃಷ್ಣಾ ನಿವಾರಕವೂ, ಮೂತ್ರಲವೂ ಮತ್ತು ಸ್ಥೌಲ್ಯನಾಶಕವೂ, ಆಗಿದೆ; ಔಷಧ ಕ್ಷೇತ್ರದಲ್ಲಿ ಇದರ ಪ್ರಯೋಗವು ಕಾಸಾದಿಗಳ ಮೇಲೆ ವಿಶೇಷವಾಗಿ ನಡೆಯುತ್ತದೆ. ಇದು

ಸ್ವೇದನವನ್ನೂ, ಜ್ವರ ಪರಿಹಾರವನ್ನೂ ಮಾಡುತ್ತದೆ. ಇದರ ಎಲೆಯಲ್ಲೊಂದು ಸುಗಂಧಿತವಾದ ತೈಲವಿದೆ; ಇದು ಛೇದಿ, ಮೇದೋವೃದ್ಧಿ, ಆಂತ್ರವೃದ್ಧಿಗಳನ್ನು ನಿವಾರಿಸುತ್ತದೆ. ಇದರಲ್ಲಿ ಸೊಳ್ಳೆಗಳನ್ನು ನಿವಾರಿಸುವ ಶಕ್ತಿ ಇದೆ. ಇದರ ಎಲೆಯ ಕಷಾಯ ಚಿಕ್ಕವರಿಗೆ 1 ರಿಂದ 2 ತೊಲೆಯನ್ನೂ, ದೊಡ್ಡವರಿಗೆ 4 ರಿಂದ 8 ತೊಲೆಯನ್ನೂ ಕೊಡಬೇಕು. ಕಷಾಯ ಅಥವಾ ರಸವನ್ನು ಮೈಗೆ ಲೇಪಿಸಿ ಕೊಂಡರೆ ಸೊಳ್ಳೆ, ತಿಗಣೆಗಳು ಕಡಿಯುವುದಿಲ್ಲವೆಂದು ಹೇಳಲಾಗಿದೆ.

**170. ಮರದರಿಸಿನ**—ಇದು ಲಘುವೂ, ರೂಕ್ಷವೂ, ತಿಕ್ತವೂ, ಕಷಾಯವೂ, ವಿಪಾಕದಲ್ಲಿ ಕಟುವೂ, ಉಷ್ಣವೀರ್ಯವೂ ಆಗಿದ್ದು ಕಫಪಿತ್ತಶಾಮಕವೂ, ದೀಪನವೂ, ಪಿತ್ತಸಾರಕವೂ, ವರ್ಣ್ಯವೂ, ಯಕೃದುತ್ತೇಜಕವೂ, ಮೃದುರೇಚಕವೂ; ಕಟುಪೌಷ್ಟಿಕವೂ, ರಕ್ತಶೋಧಕವೂ, ಸ್ವೇದಲವೂ, ಶೋಥಹರವೂ, ವೇದನಾಸ್ಥಾಪನವೂ, ಚಕ್ಷುಷ್ಯವೂ, ವಿಷಮಜ್ವರ ಪ್ರತಿಬಂಧಕವೂ ಆಗಿರುತ್ತದೆ. ಅಲ್ಲದೆ ಅಗ್ನಿಮಾಂದ್ಯ; ಪ್ರವಾಹಿಕಾ, ಕಾಮಾಲಾ, ಪ್ರಮೇಹ, ಯಕೃದ್ವಿಕಾರ, ಕಾಸ, ಪ್ರದರ, ವ್ರಣ, ನೇತ್ರಕರ್ಣವಿಕಾರ, ಗರ್ಭಾಶಯದಶೋಥ, ಮತ್ತು ಸ್ರಾವ, ಉಪದಂಶ, ಕಂಡೂ, ವಿಸರ್ಪವೇ ಮೊದಲಾದ ಚರ್ಮ ವಿಕಾರಗಳ ಮೇಲೆ ಸತ್ಪರಿಣಾಮವನ್ನುಂಟುಮಾಡುತ್ತದೆ. ಬಹುತೇಕ ಇದರ ಉಪಯೋಗವು ಅರಸಿನದಂತೆಯೇ ಇದ್ದರೂ ಇದು ಕಣ್ಣು, ಕಿವಿ, ಮುಖರೋಗಗಳ ಮೇಲೆ ಅತಿಶಯವಾದ ಪರಿಣಾಮವನ್ನುಂಟುಮಾಡುತ್ತದೆ. ಅಲ್ಪ ಪ್ರಮಾಣದಲ್ಲಿ ಕೊಡುವುದರಿಂದ ಇದು ಕಟುಪೌಷ್ಟಿಕವೂ (ಸಾಮಾನ್ಯ ದೌರ್ಬಲ್ಯ ನಿವಾರಕ), ದೀಪನವೂ, ಸೌಮ್ಯ ಗ್ರಾಹಿಯೂ, ಹೃದಯೋತ್ತೇಜಕವೂ ಆಗಿ ಕೆಲಸಮಾಡುತ್ತದೆ. ಶೋಥ ಮತ್ತು ವೇದನಾಯುಕ್ತಸ್ಥಾನಗಳ ಮೇಲೆ ಇದರ ಲೇಪನವು ಸತ್ಪರಿಣಾಮವನ್ನುಂಟುಮಾಡುತ್ತದೆ. ಪ್ರಮೇಹ ಮತ್ತು ಬಸ್ತಿ ಶೋಥಗಳಲ್ಲಿ ಇದನ್ನು ಜೇನು ಅಥವಾ ನೆಲ್ಲಿಯ ರಸದಲ್ಲಿ ಕೊಡುತ್ತಾರೆ. ಶ್ವೇತ ಪ್ರದರಗಳಲ್ಲೂ ಮತ್ತು ಗರ್ಭಾಶಯ ಶೈಥಿಲ್ಯಗಳಿಂದುಟಾದ ಪ್ರದರರೋಗದಲ್ಲೂ ಇದರ ಕ್ವಾಥದೊಂದಿಗೆ ಜೇನನ್ನು ಸೇರಿಸಿ ಕೊಡುವ ಕ್ರಮವುಂಟು. ಈ ರೀತಿಯಲ್ಲಿ ಕೊಟ್ಟರೆ ಕಾಮಾಲೆಯೂ ಪರಿಹಾರವಾಗುತ್ತದೆ.

**171, ಮಾವು**—ಮಾವಿನಲ್ಲಿ ಒಂದಲ್ಲ ಹಲವು ಜಾತಿಗಳುಂಟು. ಭಾವಪ್ರಕಾಶ ನಿಘಂಟುವಿನಲ್ಲಿ ಮಾವಿನಲ್ಲಿ ಎರಡು ಜಾತಿಗಳುಂಟೆಂದಿದೆ; ಒಂದು–ಬೀಜದಿಂದ ಉತ್ಪನ್ನವಾಗುವುದು; ಇನ್ನೊಂದು ಕಲಮೀ; ಅರ್ಥಾತ್ ಕಸಿಯ ಜಾತಿಯದು. ಅಲ್ಲದೆ ರಾಜನಿಘಂಟುಕಾರರು ರಾಜಾಮ್ರ, ಸಾಧಾರಣಾಮ್ರ, ಮಹಾರಾಜಾಮ್ರ, ರಸಾಲಾಮ್ರ ಮತ್ತು ಕೋಶಾಮ್ರ ಎಂದು ಐದು ಜಾತಿಗಳುಂಟೆಂದು ಹೇಳುತ್ತಾರೆ.

ಆದರೆ ಇಂದಿನ ಸಂಶೋಧನಾಯುಗದಲ್ಲಿ ಹತ್ತಲ್ಲ ಹಲವು ಜಾತಿಗಳನ್ನು ನಾವು ನೋಡುತ್ತಿದ್ದೇವೆ. ಆದರೂ ಆಳವಾಗಿ ಪರಿಶೀಲಿಸಿದಾಗ ಹಣ್ಣಿನ ಆಕಾರದಲ್ಲಿ, ಬಣ್ಣದಲ್ಲಿ, ವಾಸನೆಯಲ್ಲಿ ಮತ್ತು ರುಚಿಯಲ್ಲಿ ಕೂಡ ಪ್ರತ್ಯೇಕತೆ ಕಂಡುಬಂದರೂ ರಾಸಾಯನಿಕ ಕ್ರಿಯೆಯಲ್ಲೂ, ಗುಣಧರ್ಮಗಳಲ್ಲೂ ಮತ್ತು ಈ ಎಲ್ಲ ಮರಗಳಬೇರು ಕಾಂಡ, ಹೂ, ಎಲೆಗಳ ಆಕಾರ, ಬಣ್ಣಗಳಲ್ಲಿ ಹೆಚ್ಚಿನ ಬದಲಾವಣೆಗಳೇನೂ ಇಲ್ಲ. ಆದುದರಿಂದ ಸಾರ್ವತ್ರಿಕವಾಗಿ ಹೇಳುವುದಾದರೆ ಮಾವಿನ ಮಿಡಿಯು (ಬಾಲಾಮ್ರವು (ಓಟೆ ಬಲಿಯದೇ ಕೇವಲ ಕೋಕಿಲೆ ಇರುವ ಕಾಯಿ) ಒಗರೂ, ಹುಳಿಯೂ ಸುಗಂಧಿತವೂ, ರುಚಿಕಾರಕವೂ. ಮಲರೋಚಕವೂ, ಕಾಂತಿದಾಯಕವೂ, ಉಷ್ಣವೂ ಇದ್ದು ಹೃದ್ಯವೂ, ವಾತಪಿತ್ತವರ್ಧಕವೂ, ರಕ್ತಪಿತ್ತಕಾರಕವೂ ಆಗಿರುತ್ತದೆಯಲ್ಲದೆ ಇದು ಕಂಠರೋಗ, ಪ್ರಮೇಹ, ವಾತಮೇಹ, ಅತಿಸಾರ, ವ್ರಣ ಮತ್ತು ಯೋನಿ ದೋಷ ನಿವಾರಣೆಯಾಗುತ್ತದೆ: ಬಲಿತ ದೊಡ್ಡಕಾಯಿಯು ಅತ್ಯಂತ ಹುಳಿಯೂ ಪಿತ್ತವರ್ಧಕವೂ, ತ್ರಿದೋಷ ಮತ್ತು ರಕ್ತವಿಕಾರಗಳುಂಟು ಮಾಡುವಂತಹುದೂ ಆಗಿರುತ್ತದೆ, ಆದರೆ ಹಣ್ಣು ಮಧುರವೂ, ರಸಯುಕ್ತವೂ ಆಗಿದ್ದು ವೃಷ್ಯವೂ (ವೀರ್ಯವರ್ಧಕವೂ),ಸ್ನಿಗ್ಧವೂ, ಬಲವನ್ನು ಮತ್ತು ಸುಖವನ್ನು ಕೊಡುವುದಾಗಿದೆ. ಅಲ್ಲದೆ ಇದು ಗುರುವೂ,ವಾತನಾಶಕವೂ,ಹೃದಯಕ್ಕೆ ಹಿತಕರವೂ,ಕಾಂತಿದಾಯಕವೂ. ಶೀತಲವೂ, ಸ್ವಲ್ಪಮಟ್ಟಿಗಿ ಪಿತ್ತಕಾರಕವೂ ಮತ್ತು ಕಫವನ್ನು, ಪಿತ್ತವನ್ನು ಹೆಚ್ಚಿಸುವಂಥಾದ್ದಾಗಿದೆ: ಕಾಯಿಯನ್ನಿಳಿಸಿ ಹಣ್ಣುಮಾಡಿದ ಹಣ್ಣಿಗಿಂತಲೂ ಮರದಲ್ಲೇ ಹಣ್ಣಾದ ಹಣ್ಣಿನಲ್ಲಿ ಗುಣವು ಹೆಚ್ಚು–ಮರದಲ್ಲೇ ಹಣ್ಣಾದುದನ್ನು ಕೂಡಲೇ ತಿಂದರೆ ಸಿಪ್ಪೆಯಲ್ಲಿ ಸ್ವಲ್ಪ ಒಗರೂ. ಹಣ್ಣಿನಲ್ಲಿ ಸ್ವಲ್ಪ ಹುಳಿಯೂ ಇರುತ್ತದೆ. ಆದುದರಿಂದ ಮರದಲ್ಲಿ ಹಣ್ಣಾದುದನ್ನು ಜೋಪಾನವಾಗಿ ಇಳಿಸಿನಾಲ್ಕು ದಿನ ಬಿಟ್ಟು ತಿನ್ನುವುದು ಅತಿ ಶ್ರೇಷ್ಠ. ಆಗ ಮಾತ್ರ ಮೇಲಿನ ಗುಣಗಳಿರುತ್ತವೆ:

**172. ಮುಳ್ಳು ಹರಿವೆ**—ಇದು ಲಘುವೂ, ರೂಕ್ಷವೂ, ಮಧುರವೂ ವಿಪಾಕದಲ್ಲೂ ಮಧುರವೂ, ಶೀತವೀರ್ಯವುಳ್ಳದ್ದೂ ಆಗಿರುತ್ತದೆ; ಅಲ್ಲದೆ ಇದು ಕಫಪಿತ್ತಶಾಮಕವೂ, ರೋಚನವೂ, ದೀಪನವೂ, ಅನುಲೋಮನವೂ, ಸಾರಕವೂ, ಹೃದ್ಯವೂ, ಮೂತ್ರಲವೂ, ದಾಹ ಪ್ರಶಮನವೂ. ವ್ರಣರೋಪಣವೂ, ವಿಷಘ್ನವೂ, ಹಾಗೂ ಅರುಚಿ,ಅಗ್ನಿಮಾಂದ್ಯ, ವಿಬಂಧ ಹೃದ್ರೋಗ, ರಕ್ತಪಿತ್ತ, ಪೂಯಾಮೇಹ, ಮೂತ್ರಕೃಚ್ಛ್ರ, ಶೋಥ, ಮೊದಲಾದವುಗಳ ನಿವಾರಕವೂ ಆಗಿರುತ್ತದೆ; ಇದರಲ್ಲಿ ಬೇರೆ ಬೇರೆ ಜಾತಿಯ ಮುಳ್ಳುಹರಿವೆಗಳುಂಟು; ಆದರೆ ಬಿಳಿಯದು ಮತ್ತು ಕೆಂಪು ಈ ಎರಡು ಮುಖ್ಯವಾದವುಗಳು. ಇದರಲ್ಲೇ ಹೆಚ್ಚು ಜೌಗು ಪ್ರದೇಶದಲ್ಲಿ ಬೆಳೆಯುವ ಒಂದು ಜಾತಿಯ ಮುಳ್ಳುಹರಿವೆಯುಂಟು: ಇದರಲ್ಲಿ

ಮೇಲೆಹೇಳಿದ ಗುಣಗಳ ಜೊತೆಗೆ –ಸ್ತನಗಳ ಮತ್ತು ಗರ್ಭಾಶಯದ ನೋವನ್ನು ಗುಣಪಡಿಸುವಶಕ್ತಿ ಇದ್ದು ಅಶಕ್ತಿಯನ್ನೂ, ಅತ್ಯಾರ್ತವವನ್ನೂ ಪರಿಹರಿಸುತ್ತದೆ.

173. ಮೂಲಂಗಿ—ಇದು ಕಾರವೂ, ಲಘುವೂ, ಘಾಟೂ ಇದ್ದು ವಿಪಾಕದಲ್ಲಿ ಮಧುರವೂ, ಶೀತವೀರ್ಯವುಳ್ಳದ್ದೂ ಆಗಿರುತ್ತದೆ. ಅಲ್ಲದೆ ಇದರಲ್ಲಿ ಮೂಲವ್ಯಾಧಿ, ಕೆಮ್ಮು, ದಮ್ಮು, ಪೀನಸ, ಜ್ವರ, ನೇತ್ರದೋಷ ಮತ್ತು ಗಂಟಲಿನ ರೋಗಗಳನ್ನು ಪರಿಹರಿಸತಕ್ಕ ಗುಣವಿರುತ್ತದೆ. ಹಸಿಮೂಲಂಗಿಯ ಗಡ್ಡೆಯೂ ಮತ್ತು ಎಲೆಯ ರಸವೂ ಕೂಡ ಮೂತ್ರಕಟ್ಟೆಯನ್ನೂ, ಉರಿಯನ್ನೂ ನಿವಾರಿಸುತ್ತದೆ; ಹಸಿಯ ಮೂಲಂಗಿಯ ಅಭಾವದಲ್ಲಿ ಒಣಗಿದ ಮೂಲಂಗಿಯನ್ನೇ ಕಷಾಯದ ರೂಪವಾಗಿ ಅಥವಾ ಕಲ್ಕದ ರೂಪದಲ್ಲಿ ಉಪಯೋಗಿಸಬಹುದು. ಮೂಲಂಗಿಯ ಬೀಜ, ಎಲೆ; ಗಡ್ಡೆ ಇವುಗಳೆಲ್ಲವೂ ಔಷಧದ್ರವ್ಯವಾಗಿರುತ್ತವೆ. ಮೂಲಂಗಿಯ ಬೀಜವು ಸ್ತ್ರೀಯರ ಮಾಸಿಕ ಧರ್ಮದ ತಡೆಯನ್ನು ನಿವಾರಿಸುತ್ತದೆ. ಬೇಯಿಸಿದ ಮೂಲಂಗಿಗಿಂತಲೂ ಹಸಿಯ ಮೂಲಂಗಿಯಲ್ಲಿ ಜೀವಸತ್ವವು ವಿಶೇಷವಾಗಿದ್ದು ಇದನ್ನು ಹಸಿಯಾಗಿಯೇ ಉಪಯೋಗಿಸುವುದು ಹೆಚ್ಚು ಉಪಯೋಗಕಾರಿ. ಈ ರೀತಿಯಲ್ಲಿ ಹಸಿಯ ಮೂಲಂಗಿಯನ್ನು ನಿತ್ಯದಲ್ಲೂ ಉಪಯೋಗಿಸುವುದರಿಂದ ಜಠರಾಗ್ನಿಯು ವೃದ್ಧಿಯಾಗುತ್ತದೆ. ತ್ರಿದೋಷದ ನಿವಾರಣೆಯಾಗುತ್ತದೆ. ಮೂಲಂಗಿಯಲ್ಲಿ ದೊಡ್ಡದು, ಚಿಕ್ಕದು ಹೀಗೆ ಎರಡು ಜಾತಿಗಳುಂಟು. ಆಹಾರಕ್ಕಾಗಲೀ, ಔಷಧಕ್ಕೇ ಆಗಲಿ, ಚಿಕ್ಕಜಾತಿಯ ಮೂಲಂಗಿಯು ಶ್ರೇಷ್ಠವೆಂದು ಪರಿಗಣಿಸಲಾಗಿದೆ.

174. ಮಂಚಿಪತ್ರೆ—ಇದು ಹಸುಮಕ್ಕಳಿಗೆ ಅತ್ಯುತ್ತಮ ವನೌಷಧಿಯಾಗಿದೆ. ಇದು ಜ್ವರ, ವಾಕರಿಕೆ, ಭೇದಿ, ಕ್ರಿಮಿದೋಷಗಳನು ಪರಿಹರಿಸುತ್ತದೆ. ಇದರ ರಸವನ್ನು ಮಕ್ಕಳಿಗೆ 1 ಚಮಚೆಯಿಂದ 4 ಚಮಚೆಯವರೆಗೆ ಸ್ವಲ್ಪ ಸಕ್ಕರೆ ಸೇರಿಸಿ ಅವರವರ ವಯೋಮಾನಕ್ಕೆ ತಕ್ಕಂತೆ ಕೊಡಬೇಕೆಂಬ ನಿಯಮವಿದೆ.(ಕೆಲವರು ಮಂಚಿಪತ್ರೆಯನ್ನೂ: ನಾಗದಮನಿಯನ್ನೂ ಒಂದೆಂಬುದಾಗಿ ಭಾವಿಸಿದ್ದಾರೆ; ಆದರೆ ಇದು ಶುದ್ಧ ತಪ್ಪು. ನಾಗದಮನಿಯೇ ಪ್ರತ್ಯೇಕ— ಮಂಚಿಪತ್ರೆಯೇ ಪ್ರತ್ಯೇಕ).

175. ಮುಂಗರ ಬಳ್ಳಿ—ಇದು ಲಘುವೂ, ರೂಕ್ಷವೂ, ಮಧುರವೂ, ತಿಕ್ತವೂ, ಕಹಿಯೂ ಆಮ್ಲವಿಪಾಕವೂಆಗಿದ್ದು ಉಷ್ಣವೀರ್ಯಯುಕ್ತವಾಗಿರುತ್ತದೆ. ಅಲ್ಲದೆ ಇದು ವಾತಕಫಶಾಮಕವೂ, ರೇಚಕವೂ, ದೀಪನವೂ, ಪಾಚನವೂ, ಪಿತ್ತಕಾರಕವೂ ವೀರ್ಯವರ್ಧಕವೂ, ಕಾಮೋದ್ದೀಪಕವೂ, ರಕ್ತಶೋಧನ ಮತ್ತು ರಕ್ತಸ್ತಂಭಕವೂ ಆಗಿರುತ್ತದೆ. ಇದರಿಂದ ಕ್ರಿಮಿದೋಷ, ಉದರವಿಕಾರ,

ಅಗ್ನಿಮಾಂದ್ಯ, ಪ್ಲೀಹ, ಶೂಲೆ, ವಾತವಿಕಾರ ಮತ್ತು ನೇತ್ರವಿಕಾರಗಳೂ ದೂರ ವಾಗುತ್ತವೆ. ಚೆನ್ನಾಗಿ ಬಲಿತ ದಪ್ಪನೆಯ ಒಳ್ಳೆಯು ಅತ್ಯಂತ ಉಷ್ಣವಾಗಿದ್ದು ಆಧ್ಮಾನ, ತಿಮಿರ, ವಾತರಕ್ತ, ಅಪಸ್ಮಾರ, ವಾತವ್ಯಾಧಿ, ಶೂಲೆ ಮತ್ತು ಭೂತೋನ್ಮಾದಗಳನ್ನು ಪರಿಹರಿಸುತ್ತದೆ.

**176. ಮೆಂತ್ಯೆ**(ಮೆಂತ್ಯೆ)–ಮೆಂತೆಯು ಕಟುವೂ, ಉಷ್ಣವೂ, ರಕ್ತಪಿತ್ತ ಪ್ರಕೋಪಕವೂ, ವಾತಘ್ನವೂ, ಮಲಬದ್ಧಹರವೂ, ದೀಪನವೂ, ಪಾಚಕವೂ, ಆಗಿರುತ್ತದೆ. ಅಲ್ಲದೆ ಇದು ರೂಕ್ಷವೂ, ಹೃದ್ಯವೂ, ಬಲಕಾರಕವೂ, ಜ್ವರಘ್ನವೂ ವಾತಹರವೂ ಆಗಿರುತ್ತದೆ. ಇದರಿಂದ ವಾತರಕ್ತವೂ, ಕಫವೂ, ಕಾಸವೂ, ವಾತ ಶ್ಲೇಷ್ಮ. ಕ್ರಿಮಿರೋಗಗಳೂ, ನಿವಾರಣೆಯಾಗುತ್ತವೆ. ಔಷಧದಲ್ಲಿ ಮೆಂತೆಯ ಬೀಜವೊ, ಸೊಪ್ಪೂ ಕೂಡ ಉಪಯೋಗಕ್ಕೆ ಬರುತ್ತದೆ. ಸೊಪ್ಪನ್ನು ಅಡಿಗೆಯಲ್ಲೂ ಉಪಯೋಗಿಸುವುದರಿಂದ ಮಲಬದ್ಧತೆಯು ನಿವಾರಣೆಯಾಗುವುದಲ್ಲದೆ ಇದು ದೀಪನವೂ, ಪಾಚನವೂ ಆಗಿ ಆರೋಗ್ಯವನ್ನುಂಟುಮಾಡುತ್ತದೆ. ಮೆಂತ್ಯೆದ ಸೊಪ್ಪಿನಲ್ಲೂ ಬಹುತೇಕ ಮೆತ್ಯೆಂದ ಎಲ್ಲ ಗುಣಗಳೂ ಇದ್ದು ಇದರಲ್ಲಿ ಎಲ್ಲ ವಾತವಿಕಾರಗಳನ್ನು ಪರಿಹರಿಸತಕ್ಕ ಶಕ್ತಿ ಇರುತ್ತದೆ. ಆದುದರಿಂದಲೇ ಬಹು ದೀರ್ಘಕಾಲದಿಂದಲೂ ಮೆಂತ್ಯೆದಸೊಪ್ಪನ್ನು ಭಾರತದಾದ್ಯಂತ ಅಡಿಗೆಯಲ್ಲಿ ಉಪಯೋಗಿಸುವ ರೂಢಿಯುಂಟು; ಇದನ್ನು ಹವೆಯಲ್ಲಿ ಬೇಯಿಸಿ ಉಪಯೋಗಿಸುವುದು ಶ್ರೇಷ್ಠ: ಅದಕ್ಕಿಂತಲೂ ಹಸಿಯಾಗಿ ಉಪಯೋಗಿಸುವುದು ಮತ್ತೂ ಶ್ರೇಷ್ಠ.

**177. ರಾಮಗುಳ್ಳ**—ಇದು ಕಂಠದೋಷಹರವೂ, ಹಿಕ್ಕಾಪರಿಹಾರಕವೂ, ಆಗಿದೆ; ಅಲ್ಲದೆ ಇದು ಶೋಥಹರ, ಅಂಗಮರ್ದಪ್ರಶಮನ, ಲಘು, ಕಾಸಹರ, ಉತ್ತೇಜಕ, ಗ್ರಾಹಿ ಮತ್ತು ಕುಷ್ಠಘ್ನವಿದ್ದು ಗೃಹಣಿ, ಉದರಶೂಲೆ, ಅರುಚಿ, ಮುಖಪಾಕ ಮತ್ತು ಸೂತಕಾ ರೋಗ ನಿವಾರಕವಾಗಿರುತ್ತದೆ. ಇದರಲ್ಲಿ ಚಿಕ್ಕ ಮತ್ತು ದೊಡ್ಡ ಎರಡು ಜಾತಿಗಳುಂಟು. ಅವರ ರಾಸಾಯನಿಕ ಕ್ರಿಯೆಯಲ್ಲಿ ಎರಡರ ಗುಣಧರ್ಮಗಳೂ ಒಂದೇ ಆಗಿದೆ. ಇದನ್ನು ಲಘು ಪಂಚಮೂಲ ಮತ್ತು ದಶಮೂಲಗಳೆರಡರಲ್ಲೂ ಗಣನೆಗೆ ತರಲಾಗಿದೆ ಎಂಬುವೇ ಇದರ ವೈಶಿಷ್ಟ್ಯವನ್ನು ಸೂಚಿಸುತ್ತದೆ. ರಾಮಗುಳ್ಳ (ಕಿರುಗುಳ್ಳ). ಮತ್ತು ಹೆಗ್ಗುಳ್ಳಗಳೆರಡೂ ಕಂಡೂ ನಾಶಕವೂ, ಮತ್ತು ಕೇಶಹಿತಕರವೂ ಆಗಿವೆ, ಅಲ್ಲದೆ ನೆಲಗುಳ್ಳವೆಂಬ ಇನ್ನೊಂದು ಜಾತಿಯುಂಟು; ಅದರ ವಿವರಣೆಯನ್ನು ಬೇರೆ ಕಡೆಯಲ್ಲಿ ಕೊಡಲಾಗಿದೆ.

**178. ರಾಗಿ**—ಆಯುರ್ವೇದದ ಪ್ರಾಚೀನ ಗ್ರಂಥಗಳಲ್ಲಿ ಗೋಧಿ, ಜವೆ ಗೋಧಿ, ಅಕ್ಕಿಯ ಬಗ್ಗೆ ವಿಮರ್ಶೆಮಾಡಿದ್ದರೂ ರಾಗಿಯ ಬಗ್ಗೆ ಏನೂ ಹೇಳಿದಂತಿಲ್ಲ. ಆದರೂ ಆಧುನಿಕ ವಿಜ್ಞಾನಿಗಳ ಅಥವಾ ಅನುಭವಿಗಳ ಅಭಿಪ್ರಾಯದಂತೆ ಇದೊಂದು

ಒಳ್ಳೆಯ ಆಹಾರ ವಸ್ತು. ಇದು ಮಧುಮೇಹದವರಿಗೂ, ಬಹುಮೂತ್ರದವರಿಗೂ ಪಥ್ಯ ವಸ್ತು. ಇದು ಸುಲಭವಾಗಿ ಜೀರ್ಣವಾಗುವುದಿಲ್ಲವಾದ್ದರಿಂದ ಕಷ್ಟಜೀವಿಗಳಿಗೆ ಬಹು ಒಳ್ಳೆಯ ಆಹಾರವಾಗಿದೆ. ಇದು ಶೀತವೀರ್ಯವಿದ್ದು ಶಾಮಕವಾಗಿರುವುದರಿಂದ ಪ್ರಮೇಹಾದಿ ರೋಗಿಗಳಿಗೆ ಬಹು ಒಳ್ಳೆಯದು. ಕುರ, ಗಡ್ಡೆ, ಗ್ರಂಥಿಗಳನ್ನು ಒಡೆಯಿಸುವುದಕ್ಕಾಗಿ ರಾಗಿಹಿಟ್ಟಿನ ಪಟ್ಟು ಕಟ್ಟುವುದರಿಂದ ಅವು ಪಕ್ವವಾಗಿ ಒಡೆಯುತ್ತವೆ. ರಾಗಿಯ ಹಿಟ್ಟಿನ ಜೊತೆಯಲ್ಲಿ ಅರಿಸಿನದ ಪುಡಿಯು ಹೊಗೆಯನ್ನು ತೆಗೆದುಕೊಳ್ಳುವುದರಿಂದ ವಿಶೇಷವಾದ ನೆಗಡಿಯು ನಿವಾರಣೆಯಾಗುತ್ತದೆ. ಶರೀರದಲ್ಲಿ ಅತಿ ಉಷ್ಣತೆ ಕಂಡಾಗ ಇವರ ಅಂಬಲಿ ಅಥವಾ ಕೀಲಸ (ಸಿಹಿಖಾದ್ಯ) ಮಾಡಿಕೊಡುವ ರೂಢಿಯುಂಟು. ಹೀಗೆ ರಾಗಿಯು ಅನೇಕರಿಗೆ ಪಥ್ಯವಾದರೂ ಮೂಲವ್ಯಾಧಿಯುವರಿಗೆ ಅಪಥ್ಯವಾಗಿರುತ್ತದೆ;

**179. ಲವಂಗ**—ಲವಂಗವು ಕಟುವೂ, ತಿಕ್ತವೂ, ದೀಪನವೂ, ಪಾಚನವೂ, ಉತ್ತೇಜಕವೂ, ರುಚಿಕರವೂ ಇದ್ದು ಕಫಪಿತ್ತನಾಶಕವೂ ಮತ್ತು ನೇತ್ರ ಹಿತಕರವೂ ಆಗಿರುತ್ತದೆ. ಇದರಿಂದ ತೃಷೆಯೂ, ಛರ್ದಿಯೂ, ಆಧ್ಮಾನವೂ, ಶೂಲೆಯೂ ಕೂಡ ಪರಿಹಾರವಾಗುತ್ತದೆ. ಅಲ್ಲದೆ ಕಾಸ, ಶ್ವಾಸ; ಹಿಕ್ಕಾಶ್ವಾಸ ಮತ್ತು ಕ್ಷಯಾದಿಗಳು ಕೂಡ ಶಾಶ್ವತವಾಗಿ ಲವಂಗದಿಂದ ಕ್ಷಯಿಸುತ್ತವೆ (ಪರಿಹಾರವಾಗುತ್ತವೆ). ಲವಂಗ ಕುಸುಮವು ವೃಷ್ಯವೂ, ಶೀತಲವೂ, ಪಿತ್ತನಾಶಕವೂ, ನೇತ್ರಹಿತಕರವೂ ವೃಷ್ಯವೂ, ಮಸ್ತಿಷ್ಕರೋಗಹರವೂ ಆಗಿರುತ್ತದೆ. ಇದು ವಿಪಾಕದಲ್ಲಿ ಮಧುರರಸಯುಕ್ತವಾಗಿದ್ದು ತ್ರಿದೋಷಗಳ ಮೇಲೂ ಸತ್ಪರಿಣಾಮವನ್ನುಂಟುಮಾಡುತ್ತದೆ. ಇದನ್ನು ತೈಲ, ಚೂರ್ಣ, ಕಷಾಯ, ಲೇಪನಾದಿಗಳ ರೂಪಗಳಲ್ಲಿ ಔಷಧಗಳಲ್ಲಿ ಉಪಯೋಗಿಸಲ್ಪಡುತ್ತವೆ.

**180. ಲವಂಗಪತ್ರೆ**—ಇದು ಲಘುವೂ, ಮಧುರರಸಯುಕ್ತವೂ, ಕಿಂಚಿತ್ ತೀಕ್ಷ್ಣವೂ, ಉಷ್ಣವೀರ್ಯವೂ ಸ್ವೇದನಕರವೂ, ಮಲಶುದ್ಧಿಕರವೂ, ಸ್ತನ್ಯ ವರ್ಧಕವೂ, ಕಫ, ವಾತ, ಮೂಲವ್ಯಾಧಿ, ಹೃಲ್ಲಾಸ (ವಾಕರಿಕೆ), ಅರುಚಿ ಮತ್ತು ಪೀನಸಗಳ ಮೇಲೆ ಸತ್ಪರಿಣಾಮವನ್ನುಂಟುಮಾಡತಕ್ಕದ್ದೂ ಆಗಿರುತ್ತದೆ. ಈಎಲೆಯ ಹೆಚ್ಚಿನ ಉಪಯೋಗವು ಆಮಪ್ರಕೋಪ ಮತ್ತು ಕಫಪ್ರಧಾನರೋಗದ ಮೇಲೆ ಹೆಚ್ಚಿನ ರೀತಿಯಲ್ಲಿ ನಡೆಯುತ್ತದೆ. ಅಪಚನ, ಉದರವಾತ, ಶೂಲೆ, ಅತಿಸಾರವೇ ಮೊದಲಾದ ಪಚನೇಂದ್ರಿಯದ ವಿಕಾರಗಳ ಮೇಲೂ; ಎಲ್ಲ ಪ್ರಕಾರದ ಕಫರೋಗಗಳ ಮೇಲೂ ಗರ್ಭಾಶಯದ ಶಿಥಿಲತೆಯನ್ನು ದೂರಮಾಡುವುದರಲ್ಲೂ ಇದು ಉಗಯೋಗಿಸಲ್ಪಡುತ್ತದೆ. ಗರ್ಭಪಾತವನ್ನೂ, ಗರ್ಭಸ್ರಾವವನ್ನೂ ಇದು ತಡೆಯುತ್ತದೆ. ಗರ್ಭಾಶಯದ ಶೈಥಿಲ್ಯದಿಂದ ಹೆರಿಗೆಯಾದ ನಂತರದ ಒಳಗಿನ ದೋಷವು ಸರಿಯಾಗಿ ಹೊರಬೀಳದಿದ್ದರೆ ಇದರಿಂದ ಉಪಯೋಗವಾಗುತ್ತದೆ. ಅಲ್ಲದೆ ಚಿಕ್ಕ

ಮಕ್ಕಳ ವಾತಜ, ಕಫಜ, ಮತ್ತು ಆಮಪ್ರಕೋಪಕ್ಕೆ ಸಂಬಂಧಪಟ್ಟ ಎಲ್ಲ ರೋಗಗಳ ಮೇಲೂ ಇದು ಸತ್ಪರಿಣಾಮವನ್ನುಂಟುಮಾಡುತ್ತದೆ. ಪ್ರಮಾಣ 10 ರಿಂದ 15 ಗುಂಜಿಯವರೆಗೆ ಚೂರ್ಣರೂಪದಲ್ಲೂ ಮತ್ತು ಕಷಾಯವನ್ನು 15 ರಿಂದ 20 ಗುಂಜಿ ಯವರೆಗೂ ಕೊಡಬಹುದು. ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಕೊಟ್ಟರೆ ಶ್ವಾಸ ಕೋಶದ ಮೇಲೂ ಮತ್ತು ಕರುಳಿನ ಮೇಲೂ ದುಷ್ಪರಿಣಾಮವನ್ನುಂಟುಮಾಡುತ್ತದೆ.

**181. ಲಾವಂಚ**—ಇದು ರೂಕ್ಷ, ಲಘು, ತಿಕ್ತ, ಮಧುರ, ಗ್ರಾಹಿ, ವಿಪಾಕದಲ್ಲಿ ಕಟು ಮತ್ತು ಶೀತವೀರ್ಯವುಳ್ಳದ್ದಾಗಿರುತ್ತದೆ; ಅಲ್ಲದೆ ಇದು ಕಫ ಪಿತ್ತಶಾಮಕವೂ, ದೀಪನವೂ, ಪಾಚನವೂ, ಬಲ್ಯವೂ, ಸ್ತಂಭನವೂ, ಮಸ್ತಿಷ್ಕ, ಹೃದಯ ಮತ್ತು ನಾಡಿ ಸಂಸ್ಥಾನಶಾಮಕವೂ, ರಕ್ತಪ್ರಸಾದನವೂ, ರಕ್ತಶೋಧಕವೂ, ಕಫನಿಸ್ಸಾರಕವೂ, ಮೂತ್ರಲವೂ, ಸ್ವೇದದೌರ್ಗಂಧಹರವೂ, ಸ್ವೇದಾಪನಯನವೂ, ಕಟುಪೌಷ್ಟಿಕವೂ, ಮತ್ತು ತೃಷ್ಣಾ, ವಮನ, ದಾಹ, ವಿಸರ್ಪ, ವ್ರಣ, ಕುಷ್ಠ ತ್ವಗ್ವಿಕಾರ, ಮದ, ಮೂರ್ಛೆ, ಅತಿಸಾರ, ರಕ್ತಪಿತ್ತ, ಕಾಸ, ಶ್ವಾಸ, ಹಿಕ್ಕಾ, ಮೂತ್ರಕೃಚ್ಛ್ರ, ಪೈತಿಕಜ್ವರ, ಶೋಥ ಮೊದಲಾದ ರೋಗಗಳ ನಿವಾರಕವೂ ಆಗಿರುತ್ತದೆ. ಲಾವಂಚದಚೂರ್ಣ 15 ರಿಂದ 30 ಗುಂಜಿಯವರೆಗೂ, ಇದರ ಅರ್ಕ 3–4 ತೊಲೆ, ಹಿಮ, 2½ಯಿಂದ 4ತೊಲೆ, ಫಾಂಟ 4ರಿಂದ 8 ತೊಲೆ, ಕ್ವಾಥ ಅಥವಾ ಕಷಾಯ 5 ರಿಂದ 10 ತೊಲೆಯವರೆಗೆ ಕೊಡುವ ನಿಯಮವಿದೆ. ಅತಿಯಾದ ಉದ್ದವಿದ್ದು ತೆಳ್ಳಗೂ, ಗಟ್ಟಿಯೂ ಇರುವ ಶ್ರೇಷ್ಠವಾದ, ಪರಿಮಳಯುಕ್ತವಾದ ಲಾವಂಚದ ಬೇರನ್ನೇ, ಔಷಧಕ್ಕೆ ಉಪಯೋಗಿಸಬೇಕು.

**182. ಲೋಧ್ರ**—ಲೋಧ್ರವು ಗ್ರಾಹಿ ಮತ್ತು ದೋಷಘ್ನವಾಗಿದ್ದು ಸ್ತ್ರೀಯರ ರಕ್ತಪ್ರದರ, ಶ್ವೇತಪ್ರದರ, ಸೂತಕದೋಷ, ಮೂತ್ರದೋಷಗಳ ಮೇಲೆ ಚೆನ್ನಾಗಿ ಕೆಲಸಮಾಡುತ್ತದೆ. ಹಳೆಯವ್ರಣ, ಕಣ್ಣಿನದೋಷ ಮತ್ತು ಜಠರ ದೋಷಗಳಮೇಲೆ ಲೋಧ್ರವು ಸತ್ಪರಿಣಾಮವನ್ನುಂಟುಮಾಡುತ್ತದೆ. ಗರ್ಭ ಕೋಶದ ವಿಕಾರಗಳನ್ನು ಸರಿಪಡಿಸಿ ಈ ವಿಕಾರಗಳಿಂದ ಉಂಟಾಗಿರುವ ವಂಧ್ಯತ್ವ (ಬಂಜೆತನ) ವನ್ನು ನೀಗುವಶಕ್ತಿ ಲೋಧ್ರಕ್ಕಿದೆ. ಲೋಧ್ರದ ಮರದಿಂದ ಸಂಗ್ರಹಿಸಿ, ಒಣಗಿಸಿಟ್ಟ ಚಕ್ಕೆಯೇ ಔಷಧದ್ರವ್ಯವಾಗಿದೆ; ಇದು ಅನೇಕಾಲು ರೋಗದ ಮೇಲೂ ಒಳ್ಳೆಯ ಪರಿಣಾಮಕಾರಿಯಾದ ಕೆಲಸವನ್ನು ಮಾಡುತ್ತದೆಯಲ್ಲದೆ ಒಸಡಿನಿಂದ ರಕ್ತ, ಕೀವು ಸುರಿಯುತ್ತಿರುವುದನ್ನೂ ಗುಣಪಡಿಸುತ್ತದೆ. ಆಸ್ಯಪಾಕ, ಮುಖರೋಗಗಳು ಇದರಿಂದ ಪರಿಹಾರವಾಗುತ್ತವೆ.

**183. ಲೋಳಿಸರ**–ಸ್ಥಾನ, ದೇಶಭೇದದಿಂದ ಇದರಲ್ಲಿ ಮೂರು ಜಾತಿಯವು ಗಳುಂಟು; ಆದರೆ ಇದರಲ್ಲಿ ಒಂದು ಜಾತಿಯದು ವಿದೇಶಿಯದು; ಉಳಿದ

ಎರಡರಲ್ಲಿ ಒಂದು ಕೆಂಪು, ಇನ್ನೊಂದು ಅರಸಿನ ಬಣ್ಣದ್ದು; ಇದು ಎಲ್ಲಾ ಕಡೆಯಲ್ಲೂ ಸಾಮಾನ್ಯವಾಗಿ ಇದ್ದು ಇದರ ಗರಿಯನ್ನು ಕತ್ತರಿಸಿದರೆ ಅರಿಸಿನ ಬಣ್ಣದ ಅಂಟುದ್ರವ ವೊಂದು ಕಾಣುತ್ತದೆ; ಈ ಎರಡರ ರಾಸಾಯನಿಕ ಸಂಘಟನಾ ಕ್ರಿಯೆಯೂ ಒಂದೇ ಬಗೆಯಾಗಿರುತ್ತದೆ. ಇದು ಗುರು, ಸ್ನಿಗ್ಧ, ಪಿಚ್ಛಲ (Slimy–ಪ್ರಾಣಧಾರಕ, ಬಲಜನಕ, ಸಂಧಾನಕ), ತಿಕ್ತ, ಮಧುರವೂ, ವಿಪಾಕದಲ್ಲೂ ಮಧುರವೂ, ಕಟುವೂ, ಆಗಿದ್ದು ಶೀತವೀರ್ಯಯುಕ್ತವಾಗಿರುತ್ತದೆ. ಇದರಲ್ಲಿ ಭೇದನ, ತ್ರಿದೋಷಹರ, ಅಲ್ಪಪ್ರಮಾಣದಲ್ಲೂ ದೀಪನ, ಪಾಚನ, ಭೇದನ, ( ಹೆಚ್ಚಿನ ಪ್ರಮಾಣದಲ್ಲಿ ತೆಗೆದುಕೊಂಡರೆ ವಿರೇಚನ),ರಸಾಯನ,ಯಕೃದುತ್ತೇಜಕ, ಕ್ರಿಮಿಘ್ನ, ರಕ್ತಶೋಧಕ, ಚಕ್ಷುಷ್ಯ, ದಾಹಹರ, ಶೋಥಹರ, ಮೂತ್ರಲ, ವೇದನಾಸ್ಥಾಪನ, ವ್ರಣರೋಪಣ, ವೃಷ್ಯ, ಆರ್ತವಜನನ, ಗರ್ಭಸ್ರಾವಕರ, ತ್ವಗ್ದೋಷಹರ, ಬಲ್ಯ ಮತ್ತು ಬ್ರಂಹಣ ಸಾಮರ್ಥ್ಯವಿದೆ; ಅಲ್ಲದೆ ಇದರಿಂದ ಅಗ್ನಿಮಾಂದ್ಯ, ಗುಲ್ಮ, ಉದರಶೂಲೆ, ಪ್ಲೀಹ, ಯಕೃದ್‌ವೃದ್ಧಿ, ವಿಬಂಧ, ಮೂತ್ರಕೃಚ್ಛ್ರ, ಶುಕ್ರದೌರ್ಬಲ್ಯ, ಗ್ರಂಥಿ, ವಿಸ್ಫೋಟಕಾದಿಗಳೂ ನಿವಾರಣೆಯಾಗುತ್ತವೆ. ಲೋಳೆಸರವನ್ನು ಅತಿದೀರ್ಘಕಾಲ ಸೇವಿಸುವುದು ಹೆಚ್ಚು ಹಿತಕರವಲ್ಲ.

**184. ಲಿಂಬೆಹಣ್ಣು** ( ನಿಂಬೆಹಣ್ಣು )—ನಿಂಬೆಯು ಅಗ್ನಿದೀಪಕವೂ, ಆಮ್ಲರಸಯುಕ್ತವೂ ವಾತ, ಕಫ, ಪಿತ್ತನಾಶಕವೂ, ಶಾಮಕವೂ, ಶೋಧಕವೂ ಆಗಿದ್ದು ಮಲಬದ್ಧತೆಯನ್ನು ಪರಿಹರಿಸುವ ಗುಣದಿಂದ ಕೂಡಿರುತ್ತದೆ. ಇದರಲ್ಲಿ ಶೂಲೆ, ವಾಂತಿ, ಕ್ರಿಮಿದೋಷಗಳನ್ನು ನಿವಾರಿಸುವಶಕ್ತಿ ಇರುತ್ತದೆ. ಅಲ್ಲದೆ ಇದರಿಂದ ಪೀನಸ, ಪಾಂಡು, ಕಾಮಾಲೆ, ಬಿಕ್ಕಳಿಕೆ, ದಮ್ಮು, ಗುಲ್ಮ ಮೊದಲಾದ ರೋಗಗಳು ನಿವಾರಣೆಯಾಗುತ್ತವೆ. ದಣವು, ಬಾಯಾರಿಕೆಗಳನ್ನು ಇದು ಪರಿಹರಿಸುತ್ತದೆ. ಉದರಕ್ಕೆ ಸಂಬಂಧಪಟ್ಟ ರೋಗಗಳು, ಮತಿಭ್ರಮೆ ಮತ್ತು ಸಂಧಿವಾತ ಜ್ವರಗಳ ಮೇಲೂ ಇದು ಸತ್ಪರಿಣಾಮವನ್ನುಂಟುಮಾಡುತ್ತದೆ. ಲಿಂಬೆಯ ಎಲೆ, ಬೇರು, ಹಣ್ಣು, ಬೀಜ ಇವುಗಳೆಲ್ಲವೂ ಔಷಧದ್ರವ್ಯಗಳಾಗಿರುತ್ತವೆ; ಪಿತ್ತರೋಗಿಗಳ ಮೇಲೆ ನಿಂಬೆಯು ಉತ್ತಮವಾದ ಪರಿಣಾಮವನ್ನುಂಟುಮಾಡುತ್ತದೆ. ವಿಷೂಚಿಕಾ ರೋಗ (ಕಾಲರಾ) ವನ್ನೂ ನಿವಾರಿಸುವಶಕ್ತಿಯು ಲಿಂಬೆಹಣ್ಣಿಗಿದೆ. ಇದರಿಂದ ಕಣ್ಣಿನ ದೋಷವು ಪರಿಹಾರವಾಗಿ ದೃಷ್ಟಿಮಾಂದ್ಯವು ನಿವಾರಣೆಯಾಗುತ್ತದೆ.

**185. ವತ್ಸನಾಭಿ**—ಆಯುರ್ವೇದದಲ್ಲಿ ಶಾಸ್ತ್ರಾನುಸಾರವಾಗಿ ಇದರ ಶುದ್ಧೀಕ್ರಮವನ್ನು ಹೇಳಿದೆ; ಅಲೋಪತಿ ಮತ್ತು ಹೋಮಿಯೋಪಥಿಯಲ್ಲಿ ಇದನ್ನು ಶುದ್ಧಿಮಾಡುವ ಕ್ರಮವಿಲ್ಲ. ಆದರೂ ಪ್ರಕೃತ ಆಯುರ್ವೇದದ ಮಾರ್ಗವನ್ನೇ ನಾವಿಲ್ಲಿ ಹೇಳುತ್ತಿರುವುದರಿಂದ ವತ್ಸನಾಭಿಯ ಶುದ್ಧೀಕರಣ

ಆಗತ್ಯವೆಂದೇ ತಿಳಿಯಬೇಕು: (ಇದರ ಶುದ್ಧೀಕರಣವನ್ನು ದ್ರವ್ಯಶುದ್ಧಿ ಎಂಬ ವಿಭಾಗದಲ್ಲಿ ನೋಡಿ) ಕ್ರಮವಾಗಿ ಶುದ್ಧಿಯಾದ ವತ್ಸನಾಭಿಯು ರಸಾಯನವೂ, ಬಲಕರವೂ, ವಾತ, ಕಫ, ಕುಷ್ಠ, ವಾತರಕ್ತ, ಅಗ್ನಿಮಾಂದ್ಯ, ಶ್ವಾಸ, ಕಾಸ, ಯಕೃತ್, ಪ್ಲೀಹ, ಉದರರೋಗ, ಭಗಂದರ, ಗುಲ್ಮ, ಪಾಂಡು, ಶೂಲೆ, ಶೋಥ, ಪಕ್ಷಘಾತ, ನಾಡಿದೌರ್ಬಲ್ಯ, ಜ್ವರ, ಕಂಠರೋಗ, ಮಧುಮೇಹ, ಶುಕ್ರಮೇಹ, ಅರ್ಶ, ವ್ರಣ ಮೊದಲಾದವುಗಳ ನಾಶಕವೂ, ಬೃಂಹಣವೂ, ವೀರ್ಯವರ್ಧಕವೂ ವೇದನಾಸ್ಥಾಪನವೂ, ಹೃದಯೋತ್ತೇಜಕವೂ, ಮೂತ್ರಲವೂ, ಸ್ವೇದಜನಕವೂ, ಶುಕ್ರಸ್ತಂಭಕವೂ, ಮತ್ತು ಆರ್ತವಜನಕವೂ ಆಗಿದೆ: ಆದರೆ ಇದನ್ನು ಅಲ್ಪ ಪ್ರಮಾಣದಲ್ಲಿ ಕೊಡಬೇಕಲ್ಲದೆ ಹೆಚ್ಚಿನ ಪ್ರಮಾಣದಲ್ಲಿ ಕೊಡಲೇ ಕೂಡದೆಂಬುದನ್ನು ಮರೆಯಬಾರದು; ಹೊತ್ತಿಗೆ 2 ರಿಂದ 4 ಗುಂಜಿಯವರೆಗೆ ಕೊಡಬಹುದು. ಅನುಪಾನಕ್ಕೆ ಹಸುವಿನ ಹಾಲು, ಸಕ್ಕರೆ, ಜೇನುಗಳಲ್ಲಿ ಯಾವುದಾದರೊಂದನ್ನು ಕೊಡಬೇಕು.

**186. ವಾಯುವಿಳಂಗ**—ಇದು ಗುರುವೂ, ತೀಕ್ಷ್ಣವೂ, ಕಟುವೂ, ವಿಪಾಕದಲ್ಲಿ ಮಧುರವೂ, ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ ಅಲ್ಲದೆ ಇದು ಕ್ರಿಮಿನಾಶಕವೂ, ಪಾಚಕವೂ, ರೋಚಕವೂ, ದೀಪಕವೂ, ಆಗಿದ್ದು ಶೂಲಾ ನಿವಾರಕ ವಾಗಿರುತ್ತದೆ. ಇದರ ಒಣಗಿದ ಕಾಯಿಯು ಔಷಧ ದ್ರವ್ಯವಾಗಿ ಉಪಯೋಗಕ್ಕೆ ಬರುತ್ತದೆ. ಇದು ಮೃದು ವಿರೇಚಕವಾಗಿದ್ದು ಲಾಡಿಹುಳ, ಕೊಕ್ಕೆಹುಳ ಮತ್ತು ಜಂತುಹುಳಗಳನ್ನು ಕೂಡ ಪರಿಹರಿಸುತ್ತದೆ. ಹುಳಗಳ ಉಪದ್ರವಗಳಲ್ಲಿ ಮೊದಲು ಇದನ್ನು ಕೊಟ್ಟು ಅನಂತರ ವಿರೇಚನಕ್ಕೆ ಕೊಡುವ ಕ್ರಮವಿದೆ. ಇದು ಕ್ಷಯಘ್ನವಾಗಿರುವುದಲ್ಲದೆ ಸಾಮಾನ್ಯ ಕ್ರಿಮಿನಾಶಕವೆಂದೇ ಪ್ರತೀತಿ ಪಡೆದಿದೆ.

**187. ವಿಷ್ಣುಕ್ರಾಂತಿ**—ವಿಷ್ಣುಕ್ರಾಂತಿಯು, ರೂಕ್ಷವೂ, ಶೀತವೀರ್ಯವೂ ಉಳ್ಳದ್ದಾಗಿದ್ದು ತ್ರಿದೋಷಹರವಾಗಿರುತ್ತದೆ. ಇದರಿಂದ ಜ್ವರ, ಕುಷ್ಠ, ಪಿತ್ತ, ಕ್ರಿಮಿ, ವ್ರಣರೋಗಗಳು ಪರಿಹಾರವಾಗುವುದಲ್ಲದೆ ತಲೆಶೂಲೆಯೂ, ದಾಹವೂ ಕಣ್ಣಿನ ದೋಷವೂ ಕೂಡ ನಿವಾರಣೆಯಾಗುತ್ತದೆ. ಇದರಲ್ಲಿ ಸ್ಮರಣ ಶಕ್ತಿಯನ್ನು ವೃದ್ಧಿಗೊಳಿಸುವ ಮತ್ತು ಗ್ರಹಬಾಧೆಯನ್ನು ನೀಗಿಸುವ ಗುಣವಿರುತ್ತದೆ. ಇದರಲ್ಲಿ ಬ್ರಹ್ಮ, ವಿಷ್ಣು, ರುದ್ರಗಳೆಂಬ ಮೂರು ಜಾತಿಗಳುಂಟು. ಆದರೆ ಕರಿಯ ಹೂವಿನ ಜಾತಿಯು ದೊರೆಯುವುದು ತೀರ ವಿರಳ. ಹೆಚ್ಚಾಗಿ ನೀಲಿ ಮತ್ತು ಅಪರೂಪವಾಗಿ ಬಿಳಿಯ ಜಾತಿಯ ವಿಷ್ಣುಕ್ರಾಂತಿಯು ದೊರೆಯುತ್ತದೆ. ಔಷಧ ಪ್ರಯೋಗದಲ್ಲಿ ಬಿಳಿಯದು ಅತಿಶ್ರೇಷ್ಠ. ಇದರ ಅಭಾವದಲ್ಲಿ ನೀಲಿಯದನ್ನೂ ಉಪಯೋಗಿಸ ಬಹುದು. ವಿಷ್ಣುಕ್ರಾಂತಿಯಲ್ಲಿ ಕಿಂಚಿತ್ ರೇಚಕಗುಣವೂ ಇದ್ದು ಇದು ಬುದ್ಧಿ

ಭ್ರಮಣೆ, ರಕ್ತಭೇದಿ, ಕೆಮ್ಮು, ದಮ್ಮು, ಕ್ಷಯಗಳ ಮೇಲೂ ಸತ್ಪರಿಣಾಮ ವನ್ನುಂಟುಮಾಡುತ್ತದೆ; ವಂಧ್ಯತ್ವವನ್ನು (ಮಕ್ಕಳಾಗದಿರುವುದು) ನೀಗುತ್ತದೆ. ವಿಷಬಾಧೆಯನ್ನು ಪರಿಹರಿಸುತ್ತದೆ.

**188. ವಿಷಮುದಾರಿ** (ವಿಷಮುದಹಾರಿ)ಇದು ಔಷಧದ ಗುಣಧರ್ಮಗಳಲ್ಲಿ ಚಿರಾಯತದಂತೆ ಕೆಲಸಮಾಡುತ್ತದೆ. ಇದು ಜ್ವರಘ್ನವೂ ವಾತಹರವೂ ಆಗಿದ್ದು ಪಾಚಕವೂ, ವಿರೇಚಕವೂ ಕೂಡ ಆಗಿರುತ್ತದೆ. ಜ್ವರಗಳಲ್ಲಿ ಇದರ ಎಲೆಯ ಸ್ವರಸ ಅಥವಾ ಕಷಾಯವನ್ನು ಮಾಡಿಕೊಡುವ ಕ್ರಮವುಂಟು. ಗಲಗಂಡದ ಮೇಲೆ ಇದರ ಬೇರಿನ ಅಥವಾ ಎಲೆಯ ಸ್ವರಸ ಒಂದು ತೊಲೆಯಷ್ಟನ್ನು ನಿತ್ಯ ಕೊಡುವುದರಿಂದ ಅದು ಪರಿಹಾರವಾಗುತ್ತದೆ. ಉನ್ಮಾದ ರೋಗಿಗಳಿಗೆ ಇದರ ಕಷಾಯವನ್ನು ಮಾಡಿ ಸ್ನಾನ ಮಾಡಿಸುತ್ತಿರುವುದರಿಂದ ಉನ್ಮಾದವು ಪರಿಹಾರವಾಗುತ್ತದೆಂದು ಅನುಭವದಿಂದ ಕಂಡುಬಂದಿದೆ. ವಿಷಮುದಾರಿಯ ಬೇರು, ಎಲೆ, ಕಾಂಡಗಳೆಲ್ಲವೂ ಔಷಧದ್ರವ್ಯಗಳಾಗಿ ಬಳಸುವ ಕ್ರಮವುಂಟು; ಇದು ನರುವಲ ಜಾತಿಗೆ ಸೇರಿದ ಔಷಧದ್ರವ್ಯವಾದರೂ ವಾಸನೆಯಲ್ಲೂ ಮತ್ತು ಗುಣದಲ್ಲೂ ಕೂಡ ಅಪಾರ ಭೇದವಿದೆ.

**189. ವೀಳ್ಯದೆಲೆ**—ಇದರ ಎಲೆಯು ಲಘುವೂ, ತೀಕ್ಷ್ಣವೂ, ಕಟುವೂ, ತಿಕ್ತವೂ, ಕಷಾಯವೂ, ಸ್ವಲ್ಪ ಕ್ಷಾರಯುಕ್ತವೂ ಮತ್ತು ವಿಪಾಕದಲ್ಲೂ ಕಟುವೇ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ ಅಲ್ಲದೆ ಇದು ಕಫವಾತಶಾಮಕವೂ ಪಿತ್ತ ಪ್ರಕೋಪವೂ, ದೀಪನವೂ, ಪಾಚನವೂ, ಕಾಂತಿದಾಯಕವೂ, ಅನುಲೋಮವೂ, ದುರ್ಗಂಧನಾಶಕವೂ, ಮುಖದೋಷನಿವಾರಕವೂ, ಲಾಲಾ ಪ್ರಸೇದಜನಕವೂ, ಹೃದಯೋತ್ತೇಜಕವೂ, ವಾಜೀಕರಣವೂ, ಶೀತಪ್ರಶಮನವೂ, ಕಟುಪೌಷ್ಟಿಕವೂ, ವಶೀಕರಣವೂ, ಪುನರೋಪಕವೂ ರಕ್ತಪಿತ್ತಕರವೂ ವೇದನಾಶಾಮಕವೂ, ಕೂಡ ಆಗಿರುತ್ತದೆ. ವೀಳ್ಯದೆಲೆಯು ವಾತರಕ್ತ, ಪೀನಸ, ಕಾಸ, ಶ್ಲೇಷ್ಮ, ಕಂಡೂ, ಕ್ರಿಮಿ, ಶೋಥ, ಜ್ವರ ಮೊದಲಾದುವುಗಳಲ್ಲಿ ಉಪಯೋಗವಾಗುತ್ತದೆ.

ವೀಳ್ಯದೆಲೆಯಲ್ಲಿ ಭೂಗುಣ ಮತ್ತು ಹವಾಗುಣಕ್ಕೆ ಹೊಂದಿಕೊಂಡು ಅನೇಕ ಜಾತಿಗಳಿರುತ್ತವೆ. ಇವುಗಳಲ್ಲಿ ಒಂದೊಂದರದೂ ರುಚಿ, ಪರಿಮಳ ಮತ್ತು ಆಕಾರವೂ ಕೂಡ ಪ್ರತ್ಯೇಕವಾಗಿಯೇ ಇದ್ದರೂ ಗುಣಧರ್ಮಗಳೂ ಮಾತ್ರ ಒಂದೇ ಇರುತ್ತವೆ. ಇದರಲ್ಲಿಯ ಕ್ಷಾರವು ಪಚನಶಕ್ತಿಯನ್ನು ವೃದ್ಧಿಗೊಳಿಸುವುದರಲ್ಲಿ ಶ್ರೇಷ್ಠವಾಗಿರುವುದರಿಂದ ಅಕ್ಕಿಯೇ ಮೊದಲಾದ ಕೇವಲ ಪಿಷ್ಟ ಪದಾರ್ಥಗಳನ್ನೇ ಸೇವಿಸುವವರಿಗೆ ಇದು ಬಹು ಪ್ರಯೋಜನಕಾರಿಯಾಗಿರುತ್ತದೆ. ಇದರಲ್ಲಿರುವ ಸುಗಂಧಿತ ದ್ರವ್ಯವು ಮೆದುಳಿನಮೇಲೆ ಒಳ್ಳೆಯ ಸತ್ಪರಿಣಾಮವನ್ನುಂಟುಮಾಡುವುದಲ್ಲದೆ ಮನಸ್ಸನ್ನೂ

ಉಲ್ಲಸಿತಗೊಳಿಸುತ್ತದೆ. ಆದರೆ ಸ್ವಲ್ಪ ಕಾಮೋತ್ತೇಜಕವಾಗಿರುವುದರಿಂದ ಇದರ ವಿಶೇಷ ಉಪಯೋಗವು ಒಳ್ಳೆಯದಲ್ಲವೆಂಬ ಅಭಿಪ್ರಾಯವೂ ಉಂಟು. ಕಫ ಪ್ರಧಾನವಾದ ರೋಗದ ಮೇಲೆ ಇದು ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತದೆ.

**190. ಸಹದೇವಿ**—ಇದು ಬಹುತೇಕ ಎಲ್ಲ ಕಾಲಗಳಲ್ಲಿಯೂ, ಎಲ್ಲ ಸ್ಥಳಗಳಲ್ಲಿಯೂ ಬೆಳೆಯುತ್ತದೆ. ಇದು ಕಹಿಯೂ, ಗುರುವೂ, ತೀಕ್ಷ್ಣವೂ, ಕಟು ವಿಪಾಕವೂ, ಉಷ್ಣವೀರ್ಯವುಳ್ಳದ್ದೂ ಆಗಿದ್ದು, ದೀಪನವೂ, ಪಾಚನವೂ, ವಿಷಹರವೂ ಆಗಿರುತ್ತದೆ. ಇದು ಸರ್ಪದಂಷ್ಟ್ರದ ಮೇಲೆ ಒಳ್ಳೆಯ ಪರಿಣಾಮ ವನ್ನುಂಟುಮಾಡುತ್ತದೆ. ಇದು ವಾತನಾಶಕವೂ, ಜ್ವರಘ್ನವೂ, ಕಫಘ್ನವೂ ಕೂಡ ಆಗಿರುತ್ತದೆ. ಅನುಪಾನ ವಿಶೇಷದಿಂದ ಅನೇಕ ರೋಗಗಳನ್ನು ಪರಿಹರಿಸುವುದರಲ್ಲಿ ಸಹದೇವಿಯ ಸ್ಥಾನ ಉನ್ನತವಾಗಿದೆ.

**191. ಸಪ್ತವರ್ಣಿ**—ಇದು ಲಘುವೂ, ಸ್ನಿಗ್ಧವೂ, ತಿಕ್ತವೂ, ಕಷಾಯವೂ, ವಿಪಾಕದಲ್ಲಿ ಕಟುವೂ, ಇದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಅಲ್ಲದೆ ತ್ರಿದೋಷಘ್ನವೂ, ಕಫವಾತಶಾಮಕವೂ, ದೀಪನವೂ, ಅನುಲೋಮವೂ, ಮೃದುವಿರೇಚನವೂ, ಬೇರೆ ಉಪಯುಕ್ತ ದ್ರವ್ಯಗಳ ಜೊತೆಯಲ್ಲಿ ಸೇರಿಸಿ ಕೊಡುವುದರಿಂದ ಸ್ತಂಭಕವೂ, ಕ್ರಿಮಿಘ್ನವೂ, ರಕ್ತಶೋಧಕವೂ, ಹೃದ್ಯವೂ, ಜ್ವರಘ್ನವೂ, (ವಿಶೇಷವಾಗಿ ವಿಷಮಜ್ವರ ಪರಿಹಾರಕ), ಸ್ತನ್ಯಜನನವೂ, ಕಟು ಪೌಷ್ಟಿಕವೂ ಮತ್ತು ಕುಷ್ಠಘ್ನವೂ, ಆಗಿರುತ್ತದೆ. ಇದರ ಪ್ರಯೋಗವು ವಿಶೇಷವಾಗಿ–ಕಫವಾತಜವಿಕಾರ, ರಕ್ತವಿಕಾರ, ಹೃದ್ರೋಗ, ಕಾಸ, ಶ್ವಾಸ, ಕಂಷ್ಠ, ವಿದ್ರಧಿ, ಜ್ವರಜನ್ಯ ದೌರ್ಬಲ್ಯ, ಆಮವಾತ, ಚರ್ಮರೋಗ, ಜೀರ್ಣ ಉದರರೋಗ, ಕಫಜನ್ಯ ಸಂಗ್ರಹಿಣಿ ಮೊದಲಾಗವುಗಳ ಮೇಲೆ ಮಾಡಲ್ಪಡುತ್ತದೆ. ವಿಷಮಜ್ವರಗಳ ಮೇಲೆ ಕ್ವಿನಾಯಿನ್‌ನಂತೆಯೇ ಇದು ಕೆಲಸ ಮಾಡುತ್ತದೆ. ಆದರೆ ಕ್ವಿನಾಯಿನ್‌ನಂತೆ ಇದು ಉಪದ್ರವಕಾರಿಯಲ್ಲ; ಇದರ ತೊಗಟೆಯ ಚೂರ್ಣ 12 ರಿಂದ 30 ಗುಂಜಿಯವರೆಗೂ, ಕಷಾಯವನ್ನು 5 ರಿಂದ 10 ತೊಲೆಯ ವರೆಗೂ, ಸ್ವರಸವನ್ನು 1 ರಿಂದ 2 ತೊಲೆಯವರೆಗೂ, ಹುವ್ವಿನ ಚೂರ್ಣವನ್ನು 6 ರಿಂದ 18 ಗುಂಜಿಯವರೆಗ, ತ್ವಚಾಸತ್ವವನ್ನು 10 ರಿಂದ 18 ಗುಂಜಿಯವರೆಗೂ ಮತ್ತು ಘನಸತ್ವವನ್ನು 10 ರಿಂದ 25 ಗುಂಜಿಯವರೆಗೂ ಕೊಡುವ ನಿಯಮವಿದೆ.

**192. ಸಜ್ಜೆ**—ಸಜ್ಜೆಯು ಒಗರೂ, ಮಧುರವೂ, ಇದ್ದು ಉಷ್ಣವೀರ್ಯ ವುಳ್ಳದ್ದಾಗಿರುತ್ತದೆ. ಅಲ್ಲದೆ ಇದು ಬಲ್ಯವೂ, ಹೃದ್ಯವೂ, ಕಫಘ್ನವೂ, ವಾತಘ್ನವೂ ಆಗಿದ್ದು ಪಾಚಕವೂ, ದೀಪನವೂ ಮತ್ತು ಜಠರಾಗ್ನಿವರ್ಧಕವೂ ಆಗಿರುತ್ತದೆ.

ಹೃದಯಸಂಬಂಧವಾದ ದೋಷವುಳ್ಳವರಿಗೆ ಇದು ಪಥ್ಯವಾಗಿದ್ದು ಧಾತುಸಂಬಂಧ ವಾದ ರೋಗಿಗಳಿಗೆ ಅಪಥ್ಯವಾಗಿದೆ. ಅಶಕ್ತರಿಗೆ ಪ್ರಮಾಣವರಿತು ಕೊಡುವುದರಿಂದ ಬಲವನ್ನೂ, ಶಕ್ತಿಯನ್ನೂ ಉಂಟುಮಾಡುತ್ತದೆ. ಪಿತ್ತವನ್ನೂ ಉದ್ರೇಕಗೊಳಿಸುವ ಶಕ್ತಿಯು ಇದಕ್ಕಿದೆ.

**193. ಸಬ್ಬಸ್ಸಿಗೆ**—ಇದು ದೀಪನವಿದ್ದು ಜಠರಾಗ್ನಿಯನ್ನು ಪ್ರದೀಪನ ಗೊಳಿಸುತ್ತದೆ. ಅಲ್ಲದೆ ಇದು ರೂಕ್ಷವೂ, ಒಗರೂ, ವಿಪಾಕದಲ್ಲಿ ಮಧುರವೂ, ಇದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಇದರಲ್ಲಿ ವಾತವನ್ನೂ ಶ್ಲೇಷ್ಮವನ್ನೂ, ಶೂಲೆಯನ್ನೂ ನಿವಾರಿಸುವ ಶಕ್ತಿ ಇರುತ್ತದೆ. ಆದರೆ ಕಿಂಚಿತ್ ಪಿತ್ತವನ್ನು ಹೆಚ್ಚಿಸುತ್ತದೆ. ಇದರ ಪಲ್ಯ, ಮಳಿ, ಸಾರುಗಳು ರುಚಿಯಾಗಿರುವುದರಿಂದ ಅಡಿಗೆಗಾಗಿ ಇದರ ಸೊಪ್ಪನ್ನು ವಿಶೇಷವಾಗಿ ಉಪಯೋಗಿಸುವ ಕ್ರಮವಿದೆ. ಇದು ಹೃದಯಕ್ಕೆ ಶಕ್ತಿಯನ್ನು ಕೊಡುತ್ತದೆ. ಸಬ್ಬಸಿಗೆಯು ಬೀಜ ಮತ್ತು ಸೊಪ್ಪುಗಳು ಔಷಧ ದ್ರವ್ಯವಾಗಿದ್ದು ಬೀಜವನ್ನು ಚೂರ್ಣರೂಪವಾಗಿಯೂ, ಸೊಪ್ಪನ್ನು ಸ್ವರಸ, ಕ್ವಾಥಗಳ ರೂಪವಾಗಿಯೂ ಉಪಯೋಗಿಸುವ ಪದ್ಧತಿಯುಂಟು. ಇದರ ಸೊಪ್ಪನ್ನು ಉರಿಯಲ್ಲಿ ಬೇಯಿಸಿ, ಉಪ್ಪು, ಮಳಿ, ಖಾರ ಹಾಕಿ ತಿನ್ನುವುದರಿಂದ ಹೆಚ್ಚಿನ ಉಪಯೋಗವಿದೆ.

**194. ಸಾಸಿವೆ**—ಸಾಸಿವೆಯು ಜಠರಾಗ್ನಿ ಪ್ರದೀಪಕವೂ, ಪಾಚಕವೂ, ಉತ್ತೇಜಕವೂ ಆಗಿದ್ದು ಸ್ವೇದ ಜನನವಾಗಿರುತ್ತದೆ ಆದರೆ ಇದನ್ನು ಅಲ್ಪಪ್ರಮಾಣದಲ್ಲಿ ಕೊಡಬೇಕು. ಹೆಚ್ಚಿನ ಪ್ರಮಾಣದಲ್ಲಿ ಕೊಟ್ಟರೆ ಇದು ವಮನವನ್ನುಂಟು ಮಾಡಿಸುತ್ತದೆ. ಇದು ಉಷ್ಣವೀರ್ಯವುಳ್ಳದ್ದಾಗಿದ್ದು ತೀಕ್ಷ್ಣವೂ, ಕಟುವೂ, ಕಹಿಯೂ ಆಗಿರುತ್ತದೆ. ಸಾಸಿವೆಯನ್ನು ಬಹಿರುಪಚಾರದಲ್ಲಿ ಲೇಪನ ರೂಪವಾಗಿ ಬಳಸುವುದುಂಟು; ಇದರಿಂದ ನೋವು ಪರಿಹಾರವಾಗುತ್ತದೆ; ವ್ರಣದಲ್ಲಿಯ ಕ್ರಿಮಿಯು ನಾಶವಾಗುತ್ತದೆ. ಆದರೆ ಬಹುಹೊತ್ತು ಇದನ್ನು ಚರ್ಮದ ಮೇಲೆ ಲೇಪಿಸಿಡುವುದರಿಂದ ಅಲ್ಲಿ ನುಚ್ಚುಗುಳ್ಳೆಗಳೇಳುವ ಸಂಭವವಿದೆ. ಸಾಸುವೆಯ ತೈಲವು ತ್ವಗ್ರೋಗನಾಶಕವಾಗಿದೆ. ಇದರಿಂದ ಕಜ್ಜಿ, ತುರಿಗಳೇ ಮೊದಲಾದ ಚರ್ಮವ್ಯಾಧಿಗಳು ಪರಿಹಾರವಾಗುತ್ತವೆ. ಸಾಸಿವೆಯನ್ನು ಅಲ್ಪಪ್ರಮಾಣದಲ್ಲಿ ಕೊಡುವುದರಿಂದ ಶ್ಲೇಷ್ಮವು ಎದೆಯಲ್ಲಿ ಕಟ್ಟಿರುವುದು ಕರಗಿ ನೀರಾಗುತ್ತದೆ. ಉದರಬಾಧೆಯು ಪರಿಹಾರವಾಗುತ್ತದೆ.

**195. ಸಾವೆ**(ಸಾವೆ)—ಇದು ಮಧುರ, ಶೀತಲ ಮತ್ತು ಲಘುವಾಗಿದ್ದು ಸ್ತಂಭಕವಾಗಿರುತ್ತದೆ. ಪಿತ್ತ ಮತ್ತು ಕಫವನ್ನು ನಿವಾರಿಸಿದರೂ ವಾತವನ್ನು ಕೆರಳಿಸುತ್ತದೆ; ಮಲಮೂತ್ರಗಳ ಬಂಧವನ್ನುಂಟುಮಾಡುತ್ತದೆ. ಇದು

ಶೂಲಪರವಾಗಿದ್ದು ನೋವು ಬಾವುಗಳ ನಿವಾರಣೆಯನ್ನುಂಟುಮಾಡುತ್ತದೆ. ಇದನ್ನು ನೋವಿನ ನಿವಾರಣೆಗಾಗಿ ಬಾಹ್ಯ ಲೇಪನವಾಗಿ ಉಪಯೋಗಿಸುವುದುಂಟು; ಸೂತಕ ಶೂಲೆಯಲ್ಲಿ ಇದನ್ನು ಸೊಂಟಕ್ಕೂ, ಹೊಟ್ಟೆಗೂ ಬಿಸಿಯನ್ನಾಗಿ ಲೇಪಿಸುವ ವಾಡಿಕೆಯುಂಟು. ಇದನ್ನು ಮಿತವಾಗಿ ಉಪಯೋಗಿಸಿದರೆ ಬಲ್ಯವೂ ಹೌದು.

**196. ಸೂರಣಗಡ್ಡೆ**—ಇದು ಲಘುವೂ, ರೂಕ್ಷವೂ, ತೀಕ್ಷ್ಣವೂ, ಕಟುವೂ, ಕಷಾಯವೂ, ವಿಪಾಕದಲ್ಲೂ ಕಟುವೇ ಆಗಿದ್ದು ಉಷ್ಣವೀರ್ಯವುಳ್ಳದ್ದಾಗಿರುತ್ತದೆ. ಅಲ್ಲದೆ ಇದು ಅರ್ಶೋಘ್ನವೂ, (ಮೂಲವ್ಯಾಧಿ ನಿವಾರಕ), ಕಫವಾತ ಶಾಮಕವೂ, ದೀಪನವೂ, ಪಾಚನವೂ, ರುಚಿವರ್ಧಕವೂ, ಅನುಲೋಮನವೂ, ಯಕೃದುತ್ತೇಜಕವೂ, ಶೂಲ ಪ್ರಶಮನವೂ, ಆರ್ತವಜನನವೂ, ಬಲ್ಯವೂ, ಮತ್ತು ರಸಾಯನೀಯವೂ, ಆಗಿರುತ್ತದೆ; ಇದು ತನ್ನ ಗುಣ ಪ್ರಭಾವದಿಂದ ಯಕೃತ್ತಿನ ಕಾರ್ಯದಲ್ಲಿ ಸುಧಾರಣೆ, ವಾಯುವಿನ ಅನುಲೋಮನ ಮತ್ತು ರಕ್ತವಾಹಿನಿಗಳ ಸಂಕೋಚನ ಈ ಮೂರು ಬಗೆಯ ಕಾರ್ಯವನ್ನು ಮಾಡುವುದರ ಮೂಲಕವಾಗಿ ಮೂಲವ್ಯಾಧಿಯ ಮೇಲೆ ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತದೆ. ಮಿತ ಪ್ರಮಾಣದಲ್ಲಿ ಇದನ್ನು ಸೇವಿಸಿದರೆ ಇದು ಶಕ್ತಿದಾಯಕವೂ, ರೋಗ ಪರಿಹಾರಕವೂ ಆಗಿರುತ್ತದೆ. ಆದರೆ ಹೆಚ್ಚಿಗೆ ಸೇವಿಸಿದರೆ ಅಜೀರ್ಣವನ್ನೂ, ಹೊಟ್ಟೆ ಉಬ್ಬರವನ್ನೂ ಉಂಟುಮಾಡುತ್ತದೆ. ಅಲ್ಲದೆ ಇದು ಉಷ್ಣವೀರ್ಯವುಳ್ಳದ್ದಾಗಿರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಸೇವಿಸಿದರೆ ರಕ್ತಪಿತ್ತ, ಕುಷ್ಠ ಮತ್ತು ಚರ್ಮ ರೋಗಗಳ ಮೇಲೆ ದುಷ್ಪರಿಣಾಮವನ್ನುಂಟುಮಾಡುತ್ತದೆ.

**197. ಸೇಬುಹಣ್ಣು**—ಸೇಬು ವಾತಪಿತ್ತನಾಶಕವೂ, ಬೃಂಹಣವೂ (ಶಕ್ತಿದಾಯಕವೂ), ಕಫಕಾರಕವೂ ಮತ್ತು ಗುರುವೂ ಆಗಿರುತ್ತದೆ; ಇದು ಶೀತ ವೀರ್ಯವುಳ್ಳದ್ದಾಗಿದ್ದು ವೃಷ್ಯವೂ, ರುಚಿಕಾರಕವೂ, ಸುಗಂಧಿತವೂ, ಶಾಮಕವೂ ಮತ್ತು ಕಾಂತಿದಾಯಕವೂ, ಆಗಿರುತ್ತದೆ. ಇದರಿಂದ ಮಸ್ತಿಷ್ಕದಶಕ್ತಿಯು ಬೆಳೆಯುತ್ತದೆ. ತಲೆಶೂಲೆ, ವಿಭ್ರಮೆ, ಸ್ಮೃತಿಭ್ರಂಶ ಮೊದಲಾದ ರೋಗಗಳ ಮೇಲೆ ಸೇಬು ಒಳ್ಳೆಯ ಸತ್ಪರಿಣಾಮವನ್ನುಂಟುಮಾಡುತ್ತದೆ; ಮೂತ್ರದೋಷವನ್ನು ನಿವಾರಿಸುತ್ತದೆ; ಹೃದಯಕ್ಕೆ ಶಕ್ತಿಯನ್ನೀಯುತ್ತದೆ. ಆದರೆ ಸುಲಭದಲ್ಲಿ ಪಚನವಾಗುವುದಿಲ್ಲ. ಆದುದರಿಂದ ಅವರವರ ಪಚನಶಕ್ತಿಯನ್ನು ನೋಡಿಕೊಂಡು ಇದನ್ನು ತಿನ್ನುವುದು ಅಗತ್ಯ.

**198. ಸೊಗದೆಬೇರು**—ಇದು ಜ್ವರಘ್ನವೂ, ದೀಪನವೂ, ಪಾಚನವೂ, ರಕ್ತಶೋಧನವೂ, ಆಗಿದ್ದು ಸೌಮ್ಯ ಗುಣವುಳ್ಳದ್ದಾಗಿರುತ್ತದೆ. ಇದು ಕಷಾಯವೂ ತಿಕ್ತವೂ ಆಗಿದ್ದು ವಿಪಾಕದಲ್ಲಿ ಮಧುರವಾಗಿರುತ್ತದೆ. ಇದರಲ್ಲಿ ಜ್ವರ ರಕ್ತದೋಷ,

ಚರ್ಮವ್ಯಾಧಿ, ಮೇಹವಿಕಾರ, ಕುಷ್ಠ, ಕಂಡೂ, ಪ್ರದರ ಮತ್ತು ಮೂತ್ರದೋಷ ಗಳನ್ನು ಪರಿಹರಿಸುವ ಶಕ್ತಿ ಇದೆ; ಇದರ ಕಷಾಯದಲ್ಲಿ ದಣಿವನ್ನು, ಬಾಯಾರಿಕೆ ಯನ್ನೂ ಪರಿಹರಿಸುವಶಕ್ತಿ ಇರುವುದಲ್ಲದೆ ಇದು ವಾತ, ಪಿತ್ತಘ್ನವೂ ಆಗಿದೆ. ಹಾಲು, ಸಕ್ಕರೆ ಸೇರಿಸಿದ ಇದರ ಕಷಾಯವು ಶಕ್ತಿದಾಯಕವಾಗಿದ್ದು ನಿತ್ಯಸೇವನೆಗೆ ಯೋಗ್ಯವಾಗಿದೆ. ಸೊಗದೆಯ ಇಡಿಯ ಗಿಡದಲ್ಲೂ ಈ ಎಲ್ಲ ಗುಣಧರ್ಮಗಳಿದ್ದರೂ ಬೇರಿನಲ್ಲಿಯ ಪ್ರಭಾವವೇ ಹೆಚ್ಚು; ಆದುದರಿಂದ ಇದರ ಬೇರನ್ನೇ ಔಷಧ ದ್ರವ್ಯವಾಗಿ ಉಪಯೋಗಿಸಬೇಕೆಂಬ ನಿಯಮವಿದೆ.

**199. ಸೋರೆಕಾಯಿ**—ಸೋರೆಯಲ್ಲಿ ಕಹಿಸೋರೆ ಮತ್ತು ಸಿಹಿಸೋರೆಗಳೆಂಬ ಎರಡು ಮುಖ್ಯ ಪ್ರಭೇದಗಳುಂಟು. ಕಹಿಸೋರೆಯ ಗುಣಧರ್ಮಗಳನ್ನು ಈ ಹಿಂದೆಯೇ 'ಕ' ವರ್ಗದಲ್ಲಿ ವಿಮರ್ಶಿಸಲಾಗಿದೆ. ಅದು ಔಷಧ ದ್ರವ್ಯವಾಗಿಯೇ ಉಪಯೋಗಿಸಲ್ಪಡುತ್ತದೆ. ಸಿಹಿಸೋರೆಯಲ್ಲೂ ಉದ್ದನೆಯವು ಮತ್ತು ದುಂಡನೆಯವು ಎಂದು ಎರಡು ಪ್ರಕಾರಗಳುಂಟು. ಆದರೆ ಇವೆರಡರ ರಾಸಾಯನಿಕ ಕ್ರಿಯೆಯೂ, ಗುಣಧರ್ಮಗಳೂ ಒಂದೇ ಆಗಿರುತ್ತವೆ: ಸೋರೆಯು ಲಘುವೂ, ಮಧುರ ಗುಣವುಳ್ಳದ್ದೂ ಮತ್ತು ಶೀತವೀರ್ಯಯುಕ್ತವೂ, ಆಗಿರುತ್ತದೆ. ಇದು ಬಲ್ಯವೂ, ವೀರ್ಯವೃದ್ಧಿಕಾರಕವೂ, ಗರ್ಭಪೋಷಕವೂ, ಮಲಬದ್ಧಕಾರಕವೂ ಮತ್ತು ಪಿತ್ತಘ್ನವೂ ಆಗಿದ್ದು ವಾತಪ್ರಕೋಪಕವೂ ಶ್ಲೇಷ್ಮಕಾರಕವೂ ಆಗಿರುತ್ತದೆ. ಸ್ತ್ರೀಯರ ಆರ್ತವ ರೋಗವನ್ನು ನಿವಾರಿಸುತ್ತದೆ. ಹೃದಯಕ್ಕೆ ಶಕ್ತಿಯನ್ನು ಕೊಡುತ್ತದೆ ಇದರ ಬೀಜವು ಮೂತ್ರಲವೂ, ವೀರ್ಯವರ್ಧಕವೂ, ವೀರ್ಯಸ್ತಂಭಕವೂ ಮತ್ತು ಮೇಹ ನಿವಾರಕವೂ, ಆಗಿರುತ್ತದೆ.

**200. ಸೌತೆಕಾಯಿ**—ಒಂದು ಸಿಹಿಜಾತಿ, ಇನ್ನೊಂದು ಕಹಿಜಾತಿ, ಮತ್ತೊಂದು ಕಾಡುಜಾತಿ ಹೀಗೆ ಮೂರು ಬಗೆಯ ಸೌತೆ ಕಾಯಿಗಳುಂಟು. ಸಿಹಿಸೌತೆಯು ಶೀತಲ, ರುಚಿಕಾರಕ, ಮೂತ್ರಲ, ತೃಪ್ತಿಕಾರಕವೂ ಆಗಿದ್ದು ಮೂತ್ರದತಡೆ, ದಾಹ, ಪಿತ್ತ, ರಕ್ತವಿಕಾರ, ತೃಷೆ, ಶೋಥ, ಜಡತೆ, ವಾಕರಿಕೆ, ಶ್ರಮ ಮೊದಲಾದುವುಗಳನ್ನು ನಾಶಪಡಿಸುತ್ತದೆ; ಇದು ಮಧುಮೇಹ ದಲ್ಲೂ ಉಪಯುಕ್ತವಾಗಿದೆ. ಹಸಿಯಾದ ಎಳೆಯ ಸೌತೆಕಾಯಿಯು ಪುಷ್ಟಿದಾಯಕ, ವೀರ್ಯಸ್ತಂಭಕ, ಪಿತ್ತನಿವಾರಕ, ಭ್ರಮಪ್ರಶಮನ; ಆದರೆ ಅತಿಯಾಗಿ ತಿಂದರೆ ಅಜೀರ್ಣವನ್ನೂ, ಜಡತೆಯನ್ನೂ ಉಂಟುಮಾಡುತ್ತದೆ; ಅರ್ಧಬಲಿತ ಸೌತೆ ಕಾಯಿಯು ಕೆಮ್ಮನ್ನೂ, ಪೀನಸವನ್ನೂ ಉಂಟುಮಾಡುತ್ತದೆ. ಸೌತೆಯ ಬೀಜವು ಪುಷ್ಟಿಕರ, ಮತ್ತು ಮೂತ್ರಲವಾಗಿದ್ದು ಸೌತೆಕಾಯಿಗಿಂತ ಇದರಲ್ಲಿ ಹೆಚ್ಚಿನ ಚಿಕಿತ್ಸಕ ಗುಣವಿದೆ. ಆದರೂ ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಸೇವಿಸುವುದು ಹಿತಕರವಲ್ಲ.

ರೋಗೋಕ್ತವಾದ ಅನುಪಾನದಲ್ಲಿ ಕೊಟ್ಟರೆ ಸೌತೆಕಾಯಿ, ಸೌತೆಬೀಜಗಳಿಂದ ಮೇಲೆ ತಿಳಿಸುವ ರೋಗಗಳಲ್ಲದೆ ಬಿಕ್ಕಳಿಕೆ, ಶ್ವೇತಪ್ರದರ, ಗರ್ಭಿಣಿಯರ ಗರ್ಭಶೂಲೆ, ವೃಕ್ಕನದೋಷ ಮೊದಲಾದವುಗಳೆಲ್ಲ ನಿವಾರಣೆಯಾಗುತ್ತವೆ.

**201. ಸ್ಮಶಾನಮಲ್ಲಿಗೆ**—ಇದರ ಬೇರು ಔಷಧ ದ್ರವ್ಯವಾಗಿದೆ. ಇದು ಶಾಮಕವೂ, ಕಾಂತಿದಾಯಕವೂ ಆಗಿದೆ. ಇತ್ತೀಚಿನ ಸಂಶೋಧನೆಯಲ್ಲಿ ಸ್ಮಶಾನಮಲ್ಲಿಗೆಯಲ್ಲಿ ಸರ್ಪಗಂಧದಲ್ಲಿರುವ ಗುಣವಿಶೇಷವಿರುವುದಾಗಿ ತಿಳಿದು ಬಂದಿದೆಯಲ್ಲದೆ ಇದು ರಕ್ತಒತ್ತಡದ ಮೇಲೂ ಮತ್ತು ಕ್ಯಾನ್ಸರ್ ಮೇಲೂ ಕೂಡ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆಂದು ಹೇಳಲಾಗಿದೆ.

**202. ಹಲಸು**—ಹಲಸು ಸುಲಭವಾಗಿ ಜೀರ್ಣವಾಗಲಾರದ ಜಡ ವಸ್ತುವಾಗಿದೆ; ಹಲಸಿನಕಾಯಿಯು ಒಗರು, ಗ್ರಾಹಿ, ಮಲಸ್ತಂಭಕ, ವಾತದಾಹಕಾರಕ, ಬಲದಾಯಕ ಹಾಗೂ ಶೀತವೀರ್ಯವುಳ್ಳದ್ದಾಗಿರುವುದರಿಂದ ಕಫ ಮತ್ತು ಮೇದೋವೃದ್ಧಿಯನ್ನುಂಟುಮಾಡುತ್ತದೆ. ಹಲಸಿನಕಾಯಿಯು ಅಡಿಗೆಗೆ ಉಪಯೋಗವಾಗುತ್ತದೆ; ತರಕಾರಿಯಾಗಿ ಇದು ಕಜ್ಜಿ, ತುರಿ ಇರುವವರಿಗೆ ಉಪಯೋಗವಾಗಿದೆ. ಇದರ ಬಲಿತ ಹಣ್ಣು ಶೀತಲವೂ,ಸ್ನಿಗ್ಧವೂ,ಜಡವೂ,(ಗರಿಷ್ಠ), ಪಿತ್ತಶಾಮಕವೂ, ವಾತಶಾಮಕವೂ, (ಮಿತವಾಗಿತಿಂದರೆ), ತೃಪ್ತಿಕಾರಕವೂ, ಬಲದಾಯಕವೂ, ಮಾಂಸವೃದ್ಧಿಕಾರಕವೂ, ಮೃದುವಿರೇಚಕವೂ, ರಕ್ತಸ್ತಂಭಕವೂ, ಶುಕ್ರದೌರ್ಬಲ್ಯನಾಶಕವೂ ಮತ್ತು ರಕ್ತಪಿತ್ತ, ವ್ರಣ, ಕ್ಷತಕ್ಷಯಗಳ ನಿವಾರಕವೂ ಆಗಿರುತ್ತದೆ. ಆದರೆ ಇದನ್ನು ಅಧಿಕವಾಗಿ ತಿಂದರೆ ಅಜೀರ್ಣವೂ, ವಾಕರಿಕೆಯೂ, ಭೇದಿಯೂ ಆಗುತ್ತದೆ; ಇದರ ಅಜೀರ್ಣ ನಿವಾರಣೆಗಾಗಿ ಬಾಳೆಯ ಹಣ್ಣನ್ನು ತಿನ್ನುವುದೊಳ್ಳೆಯದು ಅಥವಾ ಇದರ ಬೀಜವನ್ನು ಸುಟ್ಟು ತಿನ್ನಬೇಕು. ಇದು ವಿಷ್ಟಂಭಿಯಾಗಿರುವುದರಿಂದ ಗುಲ್ಮ, ಅಗ್ನಿಮಾಂದ್ಯ, ಉದರ ರೋಗಗಳಲ್ಲಿ ನಿಷಿದ್ಧವಾಗಿದೆ; ಅಂತಹವರು ಇದನ್ನು ತಿನ್ನಲೇಕೂಡದು. (ಹಲಸಿನಲ್ಲೇ ಹೆಬ್ಬಲಸು ಎಂಬ ಇನ್ನೊಂದು ಜಾತಿಯುಂಟು;ಅದರ ಕಾಯಿ ಬಹು ಚಿಕ್ಕದಾಗಿರುತ್ತದೆ; ಹಣ್ಣುಗಳ ತೊಳೆಯೂ ಅತಿ ಚಿಕ್ಕದೇ–ಅಲ್ಲದೆ ಇವನ್ನು ತಿನ್ನುವುದೂ ತೀರ ಕಡಿಮೆಯೇ).

**203. ಹತ್ತಿ**—ಇದರ ಬೀಜವೇ ಔಷಧದ್ರವ್ಯವಾಗಿದೆ. ಇದು ಗುಣದಲ್ಲಿ ಸ್ನಿಗ್ಧವೂ, ಲಘುವೂ,ರಸದಲ್ಲಿ ಮಧುರವೂ, ಕಿಂಚಿತ್ ಒಗರೂ ಮತ್ತು ವಿಪಾಕದಲ್ಲೂ ಮಧುರವೇ ಇದ್ದು ವಾತಶಾಮಕವೂ ಅಲ್ಲದೆ ಸ್ನೇಹನವಾಗಿರುವುದರಿಂದ ಕಫವರ್ಧಕವೂ, ಸ್ತನ್ಯಜನಕವೂ ಆಗಿರುತ್ತದೆ. ವೀರ್ಯದಲ್ಲಿದು ಸ್ವಲ್ಪ ಉಷ್ಣವಾಗಿರುವುದರಿಂದ ಪಿತ್ತವನ್ನು ಹೆಚ್ಚಿಸುತ್ತದೆ. ಆದರೆ ತನ್ನ ಪ್ರಭಾವದಿಂದ ವೇದನಾಸ್ಥಾಪನವನ್ನೂ ವ್ರಣರೋಪಣವನ್ನೂ ಉಂಟುಮಾಡುತ್ತದೆ; ಅಲ್ಲದೆ ತೃಷೆ, ದಾಹ, ಶ್ರಮ,

ಭ್ರಾಂತಿ ಮತ್ತು ಮೂರ್ಛೆಗಳನ್ನು ಪರಿಹರಿಸುತ್ತದೆಯಲ್ಲದೆ ಹೃದಯಕ್ಕೆ ಬಲವನ್ನೂ ಕೊಡುತ್ತದೆ. ಆದರೆ ಸ್ರಾಂಸನವಾಗಿರುವುದರಿಂದ ಕಫ ನಿಸ್ಸಾರಕವೂ ಆಗಿರುತ್ತದೆ ಮತ್ತು ಇದು ವೃಷ್ಯವೂ(ನಾಡೀ ಸಂಸ್ಥಾನಕ್ಕೆ ಪೌಷ್ಟಿಕ),ಮೂತ್ರಜನಕವೂ ಆಗಿದ್ದು ಶೂಲಾಪಹ, ಹಳೆಯ ನೋವು, ಬಾವು, ಕ್ಷಯ, ಕಫಜನ್ಯವಿಕಾರ, ವಿಷ ಮತ್ತು ವಿಷಮಜ್ವರನಾಶಕವೂ ಆಗಿರುತ್ತದೆ. ಇದು ನಾಡೀಸಂಸ್ಥಾನದ ದೌರ್ಬಲ್ಯದಿಂದುಂಟಾದ ಉನ್ಮಾದ, ಅಪಸ್ಮಾರವೇ ಮೊದಲಾದ ವಿಕಾರಗಳಮೇಲೆ ಬಹು ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ಹಾಗೆಯೇ ಇದರ ತೈಲವು ಸಂಧಿವಾತ, ಶಿರಶೂಲೆಗಳೇ ಮೊದಲಾದ ವಾತವಿಕಾರವನ್ನು ಪರಿಹರಿಸುತ್ತದೆ. ಇದರ ತೈಲವು ಆಲಿವ್‌ಆಯಿಲ್‌ನಂತೆ ಬಹು ಪ್ರಯೋಜನಕಾರಿಯಾಗಿ ಕೆಲಸಮಾಡುತ್ತದೆ.

**204. ಹರಳು(ಔಡಲ)**—ಹರಳು ಗಿಡದಲ್ಲಿ ಮೂರು ಜಾತಿಗಳಿವೆ: ಆದರೆ ಇದರಲ್ಲಿ ಚಿಕ್ಕದು ದೊಡ್ಡದುಗಳೆಂಬ ಎರಡುಮಾತ್ರ ಔಷಧಕ್ಕೆ ಬರುತ್ತವೆ. ಅದರಲ್ಲೂ ಚಿಟ್ಟಹರಳು ಹೆಚ್ಚು ಉಪಯೋಗಕಾರಿ. ಇದರ ಬೇರು, ಬೀಜ ಮತ್ತು ಎಲೆಗಳು ಕೂಡ ಔಷಧದ್ರವ್ಯಗಳಾಗಿರುತ್ತವೆ; ಇದರ ಬೀಜವು ವಿರೇಚನಕಾರಿ. ಇದರ ಹೂವನ್ನು ಅರೆದು ಲೇಪನಕ್ಕೆ ಉಪಯೋಗಿಸುವುದುಂಟು; ಹೂವು ಶೂಲಹರ; ಬೀಜದಿಂದ ತೆಗೆದ ಎಣ್ಣೆಯು ಹೆಚ್ಚು ಪ್ರಯೋಜನಕಾರಿ. ಇದು ಸಂಕೋಚಕ, ಶಾಮಕ, ವಿರೇಚಕ ಮತ್ತು ವಾತಘ್ನವಾಗಿದೆ. ಇದನ್ನು ಆಬಾಲ ವೃದ್ಧರಾಗಿ ಎಲ್ಲರಿಗೂ ವಿರೇಚನಕ್ಕಾಗಿ ಕೊಡಬಹುದು; ಸ್ತ್ರೀಯರಿಗೆ ಗರ್ಭಿಣಿಯರಾದಾಗಲೂ ಕೊಡುವ ಕ್ರಮವಿದೆ. ಆದರೆ ಶುಂಠಿಯ ಕಷಾಯದಲ್ಲಿ ಮಿಶ್ರಮಾಡಿ ಕೊಡುವುದು ಉತ್ತಮ: ಪ್ರಸವದ ವೇದನೆಯು ಪ್ರಾರಂಭವಾದೊಡನೆಯೇ ಇದನ್ನು ಚಿಕ್ಕ ಪ್ರಮಾಣದಲ್ಲಿ ಕೊಡುವುದರಿಂದ (ಶುಂಠಿ ಕಷಾಯದಲ್ಲಿ) ಹೆಚ್ಚಿನ ಪ್ರಯೋಜನ ಉಂಟು. ಇದರ ಬೇರಿನ ಜೊತೆಯಲ್ಲಿ ಶುಂಠಿಯನ್ನು ಸೇರಿಸಿ ಕಷಾಯವನ್ನು ಮಾಡಿ ಕೊಡುವುದರಿಂದ ಕಟಿಬದ್ಧವಾಯು; ಪಕ್ಕೆಶೂಲೆ, ಸಂಧಿವಾತ, ಹೃದಯಶೂಲೆ ಮೊದಲಾದ ಶೂಲೆಗಳು ಪರಿಹಾರವಾಗುತ್ತವೆ. ಪ್ರಮಾಣ—ಎಣ್ಣೆ 2 ರಿಂದ 2½ ತೊಲೆಯವರೆಗೆ ಮತ್ತು ಬೇರಿನ ಕಷಾಯವಾದರೆ—ಬೇರು 1 ರಿಂದ 1½ ತೊಲೆಯವರೆಗೆ.

**205. ಹರಿವೆಸೊಪ್ಪು** (ದಂಟಿನಸೊಪ್ಪು)—ಇದು ಒಗರೂ, ಕಷಾಯವೂ, ಶೀತವೀರ್ಯವೂ ಉಳ್ಳದ್ದಾಗಿದ್ದು ರುಚಿಯಾಗಿರುತ್ತದೆ ಅಲ್ಲದೆ ವಿಪಾಕದಲ್ಲಿ ಮಧುರಸಯುಕ್ತವಾಗಿದ್ದು ದೋಷ ವ್ಯಾಧಿಯ ಮೇಲೆ ಸತ್ಪರಿಣಾಮವನ್ನುಂಟುಮಾಡುತ್ತದೆ. ಇದರಿಂದ ರಕ್ತಾತಿಸಾರ, ರಕ್ತಪಿತ್ತ ಮತ್ತು ಸ್ತ್ರೀಯರ ಅತಿಸ್ರಾವವೂ ಕೂಡ ಪರಿಹಾರವಾಗುತ್ತದೆ. ಆದರೆ ಇದು ಕಣ್ಣಿಗೆ ಹಿತಕರವಲ್ಲ. ಮತ್ತು

ಪ್ಲೀಹದ ಮೇಲೂ ದುಷ್ಪರಿಣಾಮವನ್ನುಂಟುಮಾಡುತ್ತದೆ. ಆದರೆ ಬೇರಿನ ಕಷಾಯವು ಮೂಲವ್ಯಾಧಿಯನ್ನೂ, ಜ್ವರವನ್ನೂ ಕೂಡ ನಿವಾರಿಸುತ್ತದೆ. ಇದರಲ್ಲಿ ಮೂರುನಾಲ್ಕು ಜಾತಿಗಳುಂಟು. ಕೆಲವು ಹಸಿರು, ಕೆಲವು ಕೆಂಪು; ಕೆಲವು ಚಿಕ್ಕವು, ಕೆಲವು ದೊಡ್ಡವು. ಇವುಗಳೆಲ್ಲ ಬಹುತೇಕ ಒಂದೇ ಗುಣಧರ್ಮಗಳಿಂದ ಕೂಡಿರುತ್ತವೆ. ಇದರಲ್ಲೇ ಇನ್ನೊಂದು ಕಡು ಕೆಂಪಿನ ಜಾತಿಯದೂ ಇರುತ್ತದೆ; ಇದು ಬಹುರುಚಿ, ಆದರೆ ಮಿತವಾಗಿ ಉಪಯೋಗಿಸಬೇಕು; ಇಲ್ಲವಾದರೆ ಜೀರ್ಣ ಶಕ್ತಿಯ ಮೇಲೆ ದುಷ್ಪರಿಣಾಮವನ್ನುಂಟುಮಾಡುತ್ತದೆ. ಮಿತವಾಗಿ ಸೇವಿಸಿದರೆ ಇದರಿಂದ ಆಮಶಂಕೆ, ರಕ್ತಸ್ರಾವ, ರಕ್ತಪ್ರದರಗಳು ಪರಿಹಾರವಾಗುತ್ತವೆ. ಆಸ್ಯಪಾಕದಲ್ಲಿ ಇದರ ಕಷಾಯದ ಗಂಡೂಷವು ಒಳ್ಳೆಯದು. ಎಲೆಯರಸ ಹೊತ್ತಿಗೆ 1 ರಿಂದ 2 ಔನ್ಸ್‌ವರೆಗೆ ಬೆಳಿಗ್ಗೆ ಮಾತ್ರ.

**206. ಹಾಗಲು**—ಇದು ರಸದಲ್ಲಿ ಮಧುರವೂ, ಲಘುವೂ ವಿಪಾಕದಲ್ಲಿ ಕಹಿಯೂ ಆಗಿದ್ದು ಅಗ್ನಿದೀಪಕವೂ, ಮಲ ವಿಸರ್ಜಕವೂ, ಕುಷ್ಠಘ್ನವೂ ಆಗಿರುತ್ತದೆ. ಇದರಿಂದ ಅರುಚಿ, ಶ್ವಾಸ, ಕಾಸ ಬಿಕ್ಕಳಿಕೆ, ಮೂಲವ್ಯಾಧಿಗಳು ನಿವಾರಣೆಯಾಗುತ್ತವೆ. ಅಲ್ಲದೆ ಇದು ಜ್ವರ,ಗುಲ್ಮ, ಶೂಲೆ, ತ್ರಿದೋಷ, ಪ್ರಮೇಹ ತೊನ್ನು ಪ್ರದರ ಮತ್ತು ಹೃದಯಶೂಲೆಯನ್ನೂ ನಿವಾರಿಸುತ್ತದೆ. ಇದರ ಎಲೆ, ಬೇರು, ಕಾಯಿಗಳೆಲ್ಲವೂ ವೈದ್ಯ ಚಿಕಿತ್ಸೆಯಲ್ಲಿ ಬರುತ್ತವೆ. ಹಾಗಲದಲ್ಲಿ ಮೂರು ನಾಲ್ಕು ಜಾತಿಗಳುಂಟು; ಬಿಳಿಯ ಹಾಗಲು ಹಸುರು (ಕರಿಯ) ಹಾಗಲು ಮತ್ತು ಕಾಡು ಹಾಗಲುಗಳೆಂದು; ಇವು ಮೂರು ರಾಸಾಯನಿಕ ಸಂಘಟನೆಯಲ್ಲಿ ಒಂದೇ ಆಗಿರುತ್ತವೆ; ಆದುದರಿಂದ ಉಪಯೋಗವೂ ಒಂದೇ. ಇನ್ನೊಂದು ಗೊಡ್ಡು ಹಾಗಲು ಎಂದಿದೆ. ಇದರ ಎಲೆ, ಬಳ್ಳಿ, ಹೂವುಗಳೆಲ್ಲ ಉಳಿದ ಹಾಗಲಿನಂತೆಯೇ ಇದ್ದರೂ ಇದರಲ್ಲಿ ಕಾಯಿಗಳಾಗುವುದಿಲ್ಲ; ಯಥೇಚ್ಛವಾಗಿ ಹೂವುಗಳಾಗುತ್ತವೆ; ಅಷ್ಟೇ; ಆದರೆ ಇದು ತೀರ ಕಹಿ ಇರುತ್ತದೆ. ಇದು ವಿಷಜಂತುಗಳ ಕಡಿತದ ಮೇಲೆ ಬಹು ಪರಿಣಾಮಕಾರಿಯಾದ ಕೆಲಸವನ್ನು ಮಾಡುತ್ತದೆ. ಇದರ ಎಲೆಯಿಂದ ಮಾಡಿದ ಎಣ್ಣೆಯು ವ್ರಣಾದಿಗಳ ಮೇಲೆ ಹೆಚ್ಚಿನ ಪ್ರಯೋಜನಕಾರಿಯಾಗಿದೆ.

**207. ಹಾವುಮೆಕ್ಕೆ**—ಇದು ಶೀತಲವೂ, ತೀಕ್ಷ್ಣವೂ, ಕಹಿಯೂ, ರೇಚಕವೂ, ಆಗಿದ್ದು ಉಷ್ಣವೀರ್ಯಯುಕ್ತವಾಗಿರುತ್ತದೆ. ಅಲ್ಲದೆ ಲಘುವಾಗಿದ್ದು ಪಿತ್ತ, ಉದರರೋಗ, ಕಫ, ಕ್ರಿಮಿ, ಕೆಮ್ಮು, ಜ್ವರ, ವ್ರಣ, ಶ್ವಾಸ, ಗ್ರಂಥಿ, ಕಾಸ, ಪ್ರಮೇಹ, ಮೂಢಗರ್ಭ, ಕಾಮಲಾ, ಪ್ಲೀಹ, ಶುಷ್ಕಗರ್ಭ, ಗಲಗಂಡ, ವಿಷ, ವಾತ. ಅಪಚನ, ಆಮ, ದುಷ್ಟೋದರಗಳ ನಿವಾರಕವೂ ಕೂಡ ಆಗಿದೆ. ಇದರಿಂದ ಉದರಕ್ಕೆ ಸಂಬಂಧಪಟ್ಟ ಎಲ್ಲ ರೋಗಗಳೂ ಪರಿಹಾರವಾಗುತ್ತವೆ;

ಪಾಂಡು ರೋಗವು ಇದರಿಂದ ಗುಣವಾಗುತ್ತದೆ. ವಿಶೇಷವಾಗಿ ಆಮ ಮತ್ತು ಕಫ ನಿವಾರಣೆಯಲ್ಲಿ ಇದು ಅತ್ಯುಪಯುಕ್ತವಾಗಿದೆ. ಹಾಪುಮೆಕ್ಕೆಯಲ್ಲಿ ಬಣ್ಣ ಮತ್ತು ಗಾತ್ರಗಳಲ್ಲಿ ಬದಲಾವಣೆಗಳುಳ್ಳ ಅನೇಕ ಜಾತಿಗಳಿದ್ದರೂ ಗುಣದಲ್ಲಿ ಮತ್ತು ರಾಸಾಯನಿಕ ಸಂಘಟನೆಯಲ್ಲಿ ಎಲ್ಲ ಜಾತಿಯವುಗಳೂ ಒಂದೇ ರೀತಿಯಾಗಿರುತ್ತವೆ.

**208. ಹಾಲೇಮರ**—ಇದು ವಿಷಘ್ನ, ಜ್ವರಘ್ನ ಮತ್ತು ಬಲ್ಯವಿದ್ದು ಆಮಶಂಕೆಯನ್ನೂ, ಜ್ವರವನ್ನೂ ಪರಿಹರಿಸುತ್ತದೆ. ಹಳೆಯ ಜ್ವರಗಳಲ್ಲಿ ಇದು ವಿಶೇಷ ಪರಿಣಾಮಕಾರಿಯಾಗಿರುವುದಲ್ಲದೆ ರಾಜಯಕ್ಷ್ಮ ( ಕ್ಷಯ ) ವನ್ನೂ ಪರಿಹರಿಸುತ್ತದೆ. ಕ್ಷಯರೋಗದ ಕ್ರಿಮಿಗಳನ್ನು ನಾಶಪಡಿಸುವುದರಲ್ಲಿ ಇದರಲ್ಲಿಯ '**ಕೋನೆಸಿನ್**' ಎಂಬ ದ್ರವ್ಯವು ವಿಶೇಷ ಪ್ರಯೋಜನಕಾರಿಯಾಗಿದೆ. ಈ ಮರದ ತೊಗಟೆಯೂ ಮತ್ತು ಬೀಜವೂ ಕೂಡ ಔಷಧದ್ರವ್ಯಗಳಾಗಿವೆ. ಇವುಗಳನ್ನು ಕಷಾಯ ಮತ್ತು ಚೂರ್ಣದ ರೂಪವಾಗಿ ಉಪಯೋಗಿಸುವ ರೂಢಿ ಇದೆ.

**209. ಹಾರಕ**—ಇದು ಲಘುವೂ, ಶಾಮಕವೂ, ಒಗರೂ, ಕಷಾಯವೂ ಮತ್ತು ಶೀತವೀರ್ಯವುಳ್ಳದ್ದೂ ಆಗಿದ್ದು ಮಲಬದ್ಧತೆಯನ್ನುಂಟುಮಾಡುವ ಶಕ್ತಿ ಇದೆ. ಅರ್ಶದೋಷದಲ್ಲೂ, ರಕ್ತ ಪೀನಸದಲ್ಲೂ ಇದು ಪಥ್ಯವಾಗಿದೆ. ರಕ್ತ ಪೀನಸದಲ್ಲಿ ಇದನ್ನು ನೀರಿನಲ್ಲರೆದು ನೆತ್ತಿಗೆ ಪಟ್ಟು ಕಟ್ಟುವ ರೂಢಿಯುಂಟು; ಅಲ್ಲದೆ ಇದರ ಅನ್ನವನ್ನೇ ಆಗ ಪಥ್ಯವಾಗಿ ಕೊಡುತ್ತಾರೆ. ಶರೀರದಲ್ಲಿ ವ್ರಣಗಳಿರುವಾಗ ಇದು ಒಳ್ಳೆಯ ಪಥ್ಯ. ಸ್ಥಾವರ ಜಂಗಮಾದಿ ವಿಷದ ನಿವಾರಣೆ ನಂತರ ಕೆಲವು ಕಾಲ ಹಾರಕದ ಅನ್ನವನ್ನು ಸೇವಿಸುತ್ತಿರುವುದರಿಂದ ಅದರ ವಿಶೇಷವು ಪರಿಹಾರವಾಗುತ್ತದೆ; ಇದು ಶಕ್ತಿದಾಯಕವೂ ಆಗಿದೆ.

**210. ಹಿಪ್ಪಲಿ**—ಇದು ಲಘುವೂ, ಸ್ನಿಗ್ಧವೂ, ತೀಕ್ಷ್ಣವೂ, ಕಟುವೂ, ವಿಪಾದಕಲ್ಲಿ ಮಧುರವೂ ಮತ್ತು ಅನುಷ್ಣಶೀತವೀರ್ಯವೂ ಇದ್ದು ರಸಾಯನ, ಕಫವಾತಶಾಮಕ, ದೀಪನ, ಪಾಚನ, ಅರುಚಿನಾಶಕ, ವಾತಾನುಲೋಮನ, ಶೂಲ ಪ್ರಶಮನ, ಮೃದುರೇಚನ, ಯಕೃದುತ್ತೇಜಕ, ಮೇಧ್ಯ, ರಕ್ತೋತ್ಕ್ಲೇಶ, ರಕ್ತ ಶೋಧಕ, ಮೂತ್ರಲ, ಶಿರೋವಿರೇಚನ ಮತ್ತು ಜ್ವರಘ್ನ ವಾಗಿರುತ್ತದೆ. (ವಿಶೇಷವಾಗಿ ನಿಯತಕಾಲಿಕಜ್ವರ, ಜೀರ್ಣಜ್ವರ ಪ್ರಸೂತಿಜ್ವರಗಳ ಪ್ರತಿಬಂಧಕ), ಅಲ್ಲದೆ ಇದು ವೃಷ್ಯವಾಗಿದ್ದು ಅರುಚಿ, ಅಗ್ನಿಮಾಂದ್ಯ, ಪ್ಲೀಹವೃದ್ಧಿ, ಅಜೀರ್ಣ, ವಿಬಂಧ, ಗುಲ್ಮ ಉದರಶೂಲಾದಿರೋಗಗಳೂ, ಯಕೃದ್ವಿಕಾರ, ಅರ್ಶ, ವೃದ್ಧೌರ್ಬಲ್ಯ, ಪಾಂಡು, ಪ್ರಮೇಹ, ಆಮವಾತ, ಗೃಧ್ರಸಿ, ಕಟಿಶೂಲೆ, ಅಂಗಘಾತ, ರಕ್ತವಿಕಾರ, ಕಾಸ, ಶ್ವಾಸ, ಹಿಕ್ಕಾ, ಕ್ಷಯ, ಮೂತ್ರವಿಕಾರ, ಕುಷ್ಠವೇ ಮೊದಲಾದ ರೋಗಗಳ ಮೇಲೆ ಕೆಲಸ

ಮಾಡುತ್ತದೆ. ಆದರೆ ಇದನ್ನು ಹಸಿಯಾಗಿ ಔಷಧಕ್ಕೆ ಉಪಯೋಗಿಸಬಾರದು; ಒಂದು ವರ್ಷದಷ್ಟು ಹಳೆಯದಾದರೆ ಒಳ್ಳೆಯದು. ಹಿಪ್ಪಲಿಯ ಪೂರ್ಣ ಪ್ರಯೋಜನವು ದೊರೆಯಬೇಕಾದರೆ ಗಿಡದಿಂದ ಹಿಪ್ಪಲಿಯನ್ನು ಕಿತ್ತೊಡನೆಯೇ ಶುದ್ಧವಾದ ನೀರಿನಲ್ಲಿ 3–4 ಬಾರಿ ತೊಳೆದು, ಸ್ವಚ್ಛವಾದ ಬಟ್ಟೆಯಲ್ಲಿ ಕಟ್ಟಿ ಡೋಲಾಯಂತ್ರ ವಿಧಿಯಿಂದ ಹಸುವಿನ ಹಾಲಿನಲ್ಲಿ ಬೇಯಿಸಿ ಪುನಃ ಶುದ್ಧ ನೀರಿನಿಂದ ತೊಳೆದು ಬಿಸಿಲಿನಲ್ಲಿ ಒಣಗಿಸಿಟ್ಟುಕೊಂಡು ಉಪಯೋಗಿಸಬೇಕೆಂದಿದೆ.

**211. ಹೀರೇಕಾಯಿ**–ಹೀರೆಯಲ್ಲಿ ಕಹಿಹೀರೆ, ತುಪ್ಪೀರೆ(ತುಪ್ಪದಹೀರೆ), ಸಾಮಾನ್ಯ ಹೀರೆ ಮತ್ತು ಗೊಂಚಲು ಹೀರೆಗಳೆಂಬ ಅನೇಕ ಪ್ರಕಾರಗಳುಂಟು. ಇದರಲ್ಲಿಯ ಕಹಿಹೀರೆಯ ಗುಣಧರ್ಮಗಳನ್ನು 'ಕ' ವರ್ಗದಲ್ಲಿ ಹಿಂದೆಯೇ ಕೊಡಲಾಗಿದೆ; ಬಹುತೇಕ ಇದು ಔಷಧ ದ್ರವ್ಯವಾಗಿಯೇ ಉಪಯೋಗಿಸಲ್ಪಡುತ್ತದೆ. ಸಾಮಾನ್ಯಹೀರೆ (ಏಣುಗಳುಳ್ಳ ಹೀರೆ) ತುಪ್ಪದಹೀರೆ (ಏಣುಗಳಿಲ್ಲದಿರುವುದು) ಮತ್ತು ಗೊಂಚಲು ಹೀರೆಗಳು ಅಡಿಗೆಯಲ್ಲಿ ಉಪಯೋಗವಾಗುವುದು ಹೆಚ್ಚಾದರೂ ಔಷಧಕ್ಕೂ ಬರುತ್ತದೆ. ಈ ಮೂರರ ಗುಣಧರ್ಮಗಳೂ ಒಂದೇ ಆಗಿರುತ್ತವೆ. ಇದು ಪಾಚಕವೂ, ದೀಪಕವೂ, ಶೀತವೀರ್ಯವುಳ್ಳದ್ದೂ ಆಗಿದ್ದು ಕುಷ್ಠ, ಕ್ಷಯ, ದಮ್ಮು, ಕೆಮ್ಮು, ಪಿತ್ತಜ್ವರ, ಮೇಹವ್ಯಾಧಿಗಳ ಪರಿಹಾರಕವಾಗಿದ್ದು ಪಥ್ಯವಾಗಿರುತ್ತದೆ. ಇದರಿಂದ ವೀರ್ಯವೃದ್ಧಿಯುಂಟಾಗುತ್ತದೆ. ಅರುಚಿಯು ನಿವಾರಣೆಯಾಗುತ್ತದೆ. ಹೀರೆಯ ಬೀಜವೂ ಕೂಡ ಔಷಧದ್ರವ್ಯವಾಗಿಯೇ ಇರುತ್ತದೆ.

**212. ಹುಣಸೆ**—ಇದರ ತೊಗಟೆ, ಬೀಜ, ಹಣ್ಣು, ಎಲೆ ಇವುಗಳೆಲ್ಲವೂ ಔಷಧದ್ರವ್ಯಗಳಾಗಿವೆ. ಹಣ್ಣಿನಲ್ಲಿ ಕಿಂಚಿತ್ತು ವಿರೇಚಕ ಗುಣವಿದೆ. ಇದು ದೀಪಕ, ಪಾಚಕ ಮತ್ತು ಪಿತ್ತಶಾಮಕವಾಗಿದೆ. ಎಲೆಯರಸ ಶೂಲಘ್ನ ಗುಣವಿದೆ. ಎಲೆಯರಸದ ಜೊತೆಯಲ್ಲಿ ತೈಲವನ್ನು ಸೇರಿಸಿ, ಕಾಯಿಸಿ ನೋವಿಗೆ ಹಚ್ಚುವುದರಿಂದ ಅದು ಪರಿಹಾರವಾಗುತ್ತದೆ. ವಿಶೇಷವಾದ ದಣಿವುಂಟಾದಾಗ ಇದರ ಹಣ್ಣಿನ ಪಾನಕವನ್ನು ಮಾಡಿ ಕುಡಿಸುವ ಪದ್ಧತಿಯುಂಟು. ಬಾಯಿರುಚಿ ಕೆಟ್ಟಾಗ ಹಣ್ಣಿನ ಗೊಜ್ಜನ್ನು ಮಾಡಿ ಉಪಯೋಗಿಸುವುದುಂಟು. ಜ್ವರಾದಿಗಳಲ್ಲೂ ಹುಣಸೆಯ ಹಣ್ಣು ಹಿತಕಾರಿಯಾಗಿದೆ. ಚರ್ಮವ್ಯಾಧಿಗಳಲ್ಲಿ ಇದರ ತೊಗಟೆಯ ಭಸ್ಮವನ್ನು ಎಣ್ಣೆಯ ಜೊತೆಯಲ್ಲಿ ಕಲಸಿ ಹಚ್ಚುವ ವಾಡಿಕೆಯುಂಟು; ಯಾಕೆಂದರೆ ಇದು ಕ್ರಿಮಿಘ್ನವೂ ಹೌದು.

**213. ಹುರುಳಿ**—ಇದು ಕಫವಾತಶಾಮಕ, ಪಿತ್ತ, ರಕ್ತವಿಕಾರಕಾರಕ ವಾಗಿದ್ದು, ವಿದಾಹಿ, ಅನುಲೋಮನ, ಭೇದನ, ಲೇಖನ, ಶುಕ್ರನಾಶನ, ಶ್ವಾಸಘ್ನ,

ಕ್ರಿಮಿಘ್ನ, ಸ್ವೇದಾಪನಯನವೆ (ವರನ್ನು ತಡೆಯುವಂತಹುದು), ಗರ್ಭಾಶಯೋತ್ತೇಜಕ, ಅಶ್ಮರೀಭೇದನ, ಮೂತ್ರಲ, ಶೋಥಹರ ಮತ್ತು ಕ್ಷುತ್‌ವರ್ಧಕವಾಗಿರುತ್ತದೆ. ಅಲ್ಲದೆ ಇದರಿಂದ ಯಕೃತ್ಪ್ಲೀಹಗಳ ವಿಕಾರ, ಶೂಲೆ, ಗುಲ್ಮ, ಮೂಲವ್ಯಾಧಿ, ಪೀನಸ, ಕಾಸ, ಹಿಕ್ಕಾ (ಬಿಕ್ಕಳಿಕೆ), ಮೇದೋರೋಗ ಮೊದಲಾದವುಗಳೂ ಕೂಡ ನಿವಾರಣೆಯಾಗುತ್ತವೆ. ಅತಿಯಾದ ಬೆವರು ಬಂದು ಮೈ ತಣ್ಣಗಾದ ಸಂದರ್ಭದಲ್ಲಿ ಹುರಿದ ಹುರಳಿಯ ಹಿಟ್ಟನ್ನು ಶರೀರಕ್ಕೆಲ್ಲ ಸವರಿ ಸ್ವಲ್ಪ ತಿಕ್ಕುವುದರಿಂದ ಬೆವರು ನಿಲ್ಲುತ್ತದೆ: ಹೆರಿಗೆಯ ನಂತರ ಗರ್ಭಾಶಯದ ಶೋಧನಾರ್ಥವಾಗಿ ಹುರುಳಿಯ ಕಷಾಯ (ಕ್ವಾಥ)ವನ್ನು ಕೊಡುವ ಕ್ರಮವಿದೆ. ಹುರುಳಿಯ ಅಡಿಗೆಯನ್ನು ಊಟಮಾಡಿದ ದಿನ, ಅದನ್ನು ತಿಂದ ದಿನ ಮಾಂಸವನ್ನೂ, ಎಳ್ಳನ್ನೂ ಭಕ್ಷಿಸಕೂಡದು.

**214. ಹೊಗೆಸೊಪ್ಪು**—ಇದು ಕಟು, ತೀಕ್ಷ್ಣ, ವಿಪಾಕದಲ್ಲಿ ತಿಕ್ತ, ರೂಕ್ಷ ಮತ್ತು ಉಷ್ಣವೀರ್ಯವುಳ್ಳದ್ದಾಗಿದ್ದು, ಪಿತ್ತ ಪ್ರಕೋಪವನ್ನುಂಟುಮಾಡುತ್ತದೆಯಲ್ಲದೆ ಇದು ಕಫ ನಿಸ್ಸಾರಕವೂ, ಬಸ್ತಿಶೋಧಕವೂ, ವೇದನಾಶಾಮಕವೂ, ಛಿಕ್ಕಾಜನನವೂ, ಕ್ರಿಮಿಘ್ನವೂ, ಮದಕರವೂ, ಭ್ರಾಮಕವೂ, ವಾಮಕರವೂ, ಕಿಂಚಿತ್ ಸಾರಕವೂ, ದೃಷ್ಟಿಮಾಂದ್ಯಕರವೂ, ವಾತಾನುಲೋಮವೂ, ಮೂತ್ರಲವೂ, ಲಾಲಾ ನಿಸ್ಸಾರಕವೂ, ಆಗಿರುತ್ತದೆ ಮತ್ತು ಕಫ, ಶ್ವಾಸ, ಉದರವಾತ ದಂತ ವಿಕಾರಗಳಲ್ಲಿ ಪ್ರಯೋಜನಕಾರಿಯಾಗಿದೆ; ಹಸಿಯ ತಂಬಾಕಿನ ಎಲೆಯ ರಸವು ಶೂಲಹರವೂ, ಆಕ್ಷೇಪ ಹರವೂ, ಆಗಿದೆಯಲ್ಲದೆ ಕ್ರಿಮಿಘ್ನವಾಗಿದೆ. ಆದರೆ ಇದನ್ನು ತುರ್ತು ಸಂದರ್ಭದಲ್ಲಲ್ಲದೇ ಯಾವುದೇ ಸಂದರ್ಭದಲ್ಲೂ ಹೊಟ್ಟೆಗೆ ತೆಗೆದುಕೊಳ್ಳುವುದು ಹಾನಿಕರವೆಂದೇ ತಿಳಿಯಬೇಕು.

**215. ಹೊನಗೊನ್ನೆ**—ಇದು ಲಘುವೂ, ಒಗರೂ, ಶೀತವೀರ್ಯ ಉಳ್ಳದ್ದೂ ಆಗಿದ್ದು ತ್ರಿದೋಷಹರವೂ, ಕ್ರಿಮಿಘ್ನವೂ, ಶ್ಲೇಷ್ಮಹರವೂ ಇರುತ್ತದೆ. ಇದರಿಂದ ಜ್ವರ ಕಾಸಶ್ವಾಸ, ಕ್ರಿಮಿರೋಗ ಮತ್ತು ಮೂಲವ್ಯಾಧಿಗಳು ಕೂಡ ನಿವಾರಣೆಯಾಗುತ್ತವೆ. ಇದು ಕಣ್ಣಿನ ವ್ಯಾಧಿಗಳನ್ನೆಲ್ಲ ಪರಿಹರಿಸುತ್ತದೆ; ಶಾಮಕವಾಗಿದ್ದು ಮಸ್ತಿಷ್ಕವನ್ನು ಶಾಂತವಾಗಿರಿಸುತ್ತದೆ. ವೀರ್ಯವೃದ್ಧಿಯನ್ನುಂಟುಮಾಡುತ್ತದೆ. ಇದನ್ನು ಸ್ವರಸ, ಕ್ವಾಥ, ತೈಲರೂಪವಾಗಿ ಉಪಯೋಗಿಸುವ ಕ್ರಮವಿದೆ; ಇದರ ತೈಲವು ತಲೆಗೆ ಶಾಂತಿಯನ್ನೂ, ಶರೀರಕ್ಕೆ ಕಾಂತಿಯನ್ನೂ ಕೊಡುತ್ತದೆ. ಹೊನಗನ್ನೆಯನ್ನು ಅಡಿಗೆಗೆ ಉಪಯೋಗಿಸುವ ಪದ್ಧತಿ ಅತಿ ಪ್ರಾಚೀನಕಾಲದಿಂದಲೂ ರೂಢಿಯಲ್ಲುಂಟು; ದೇಹಸ್ವಾಸ್ಥ್ಯ ದೃಷ್ಟಿಯಿಂದ ಹೊನಗನ್ನೆಯ ಮಳೆ, ಪಲ್ಯಗಳು ಶರೀರದ ಮೇಲೆ ಸತ್ಪರಿಣಾಮವನ್ನುಂಟು

ಮಾಡುತ್ತದೆ; ಮಲಬದ್ಧತೆಯನ್ನು ನಿವಾರಿಸುತ್ತದೆ; ಶರೀರದ ಉಷ್ಣತೆಯನ್ನು ನೀಗುತ್ತದೆ; ಇವುಗಳೆಲ್ಲ ಬಡವರ ಬಂಧುಗಳಂತೆ ಕೆಲಸ ಮಾಡುತ್ತವೆ.

**216. ಹೊಂಗೆ**—ಇದು ಲಘುವೂ, ಉಷ್ಣವೂ, ಪಾಚಕವೂ, ವಿರೇಚಕವೂ, ಉತ್ತೇಜಕವೂ, ಪಿತ್ತಕರವೂ, ಶೋಧನವೂ, ಪರಿವರ್ತಕವೂ ಇದ್ದು ಕಫ, ವಾತ, ಕ್ರಿಮಿ, ಕಂಡೂ, ಅರ್ಶಶೋಥ, ಉದರವಾತ ಮತ್ತು ಆಧ್ಮಾನಪರವಾಗಿದೆ. ಅಲ್ಲದೆ ಇದರಿಂದ ಕುಷ್ಠ, ಭಗಂಧರ, ಗುಲ್ಮ, ತೊನ್ನು, ಮಧುಮೇಹ ಮೊದಲಾದ ರೋಗಗಳೂ ನಿವಾರಣೆಯಾಗುತ್ತವೆ; ದಣಿವನ್ನು ನೀಗಿ ತೃಪ್ತಿಯನ್ನುಂಟುಮಾಡ ತಕ್ಕ ಗುಣ ಇದರ ಮರದ ನೆರಳಿಗಿದೆ. ಆದುದರಿಂದಲೇ ಹಿರಿಯರು ಹೊಂಗೆಯ ನೆರಳನ್ನು ತಾಯಿಯ ಮಡಿಲಿಗೆ ಹೋಲಿಸಿದ್ದಾರೆ. ತಾಯಿಯ ಮಡಿಲಲ್ಲಿ ಮಗುವು ಎಷ್ಟು ಸುರಕ್ಷಿತವಾಗಿರುತ್ತದೆಯೋ ಹಾಗೆಯೇ ಹೊಂಗೆಯ ನೆರಳಲ್ಲೂ ಪ್ರಾಣಿಕೋಟಿಗಳು ಸುರಕ್ಷಿತವಾಗಿ ಇರುವವೆಂದರ್ಥ; ಅರ್ಥಾತ್ ಹೊಂಗೆಯ ನೆರಳು ಆರೋಗ್ಯದಾಯಕ. ಹೊಂಗೆಯ ಎಲೆ, ಕಾಯಿ, ಬೇರು, ತೊಗಟೆಗಳೆಲ್ಲವೂ ಔಷಧದ್ರವ್ಯಗಳಾಗಿವೆ.

**217. ಶಮಿ**—ಶಮಿಯಲ್ಲಿ ಚಿಕ್ಕಜಾತಿಯದು ಮತ್ತು ದೊಡ್ಡಜಾತಿಯ ದೆಂದು ಎರಡು ಪ್ರಕಾರಗಳಿವೆ; ಚಿಕ್ಕಜಾತಿಯವು ಮರಗಳಾಗದೇ ಚಿಕ್ಕ ಕುರುಚಲು ಗಳಾಗಿ ಬೆಳೆಯುತ್ತವೆ; ದೊಡ್ಡದು ಮರವಾಗುತ್ತದೆ; ಆದರೆ ರಾಸಾಯನಿಕ ಸಂಘಟನೆಯಲ್ಲಿ, ಗುಣಧರ್ಮಗಳಲ್ಲಿ ಎರಡೂ ಒಂದೇ; ಇವರಲ್ಲಿ ಚಿಕ್ಕ ಚಿಕ್ಕ ಅತೀರುಚಿಯಾದ ಹಣ್ಣುಗಳಾಗುತ್ತವೆ. ಶಮಿಯು ಗುರು (ಚಿಕ್ಕಶಮಿಯು ಲಘು ಎಂಬ ಅಭಿಪ್ರಾಯವೂ ಇದೆ), ರೂಕ್ಷ, ಕಷಾಯ, ಮಧುರ, ವಿಪಾಕದಲ್ಲಿ ಕಟುವಿದ್ದು ಶೀತ ವೀರ್ಯವುಳ್ಳದ್ದಾಗಿರುತ್ತದೆ. ಇದು ಕಫಪಿತ್ತಶಾಮಕ, ರೋಚಕ, ಸ್ತಂಭಕ ಮತ್ತು ಗ್ರಾಹಿಯಾಗಿದ್ದು ಅತಿಸಾರ, ಭ್ರಮೆ, ಮಸ್ತಿಷ್ಕ ದೌರ್ಬಲ್ಯ, ಅರುಚಿ, ಪ್ರವಾಹಿಕಾ, ಅರ್ಶ, ಕ್ರಿಮಿ, ರಕ್ತಪಿತ್ತ ಮತ್ತು ಚರ್ಮರೋಗಗಳನ್ನು ಪರಿಹರಿಸುವ ಸಾಮರ್ಥ್ಯ ವುಳ್ಳದ್ದಾಗಿರುತ್ತದೆ. ಇದು ಚೇಳು, ಹಾವು ಮೊದಲಾದ ವಿಷಜಂತುಗಳ ವಿಷವನ್ನು ಪರಿಹರಿಸುತ್ತದೆ. ಇದರ ಕಾಯಿಯ ಚೂರ್ಣ 6 ರಿಂದ 18 ಗುಂಜಿ, ಎಲೆಯ ಕಷಾಯ 5 ರಿಂದ 10 ತೊಲೆಯವರೆಗೆ ಕೊಡುವ ನಿಯಮವಿದೆ; ರೋಗೋಕ್ತ ಅನುಪಾನ ಅನುಸರಿಸುವುದು ಒಳ್ಳೆಯದು.

**218. ಶುಂಠಿ**—ಇದು ಗುರು, ಸ್ನಿಗ್ಧ, ತೀಕ್ಷ್ಣ ಮತ್ತು ಉಷ್ಣವೀರ್ಯ ವುಳ್ಳದ್ದಾಗಿ ಮಲಭೇದಕವೂ, ಅಗ್ನಿದೀಪಕವೂ, ಕಟುರಸಯುಕ್ತವೂ ಹಾಗೂ ವಿಪಾಕ ದಲ್ಲಿ ಮಧುರ ರಸಯುಕ್ತವೂ ಆಗಿರುತ್ತದೆ. ಇದರಲ್ಲಿ ವಾತ ಮತ್ತು ಕಫಗಳನ್ನು ನಿವಾ ರಿಸುವ ಶಕ್ತಿ ಇದೆ; ಶುಂಠಿಯಲ್ಲಿ ಇತರ ಯಾವ ಔಷಧದಲ್ಲಿಯೂ ಇಲ್ಲದಷ್ಟು ಗುಣ

ವಿಶೇಷಗಳಿವೆ; ಪ್ರತಿದಿನ ಊಟಕ್ಕೆ ಮೊದಲು ಒಂದು ಚೂರು ಶುಂಠಿಯನ್ನು ಸ್ವಲ್ಪ ಉಪ್ಪು ಸೇರಿಸಿ ತಿನ್ನುವುದರಿಂದ ಊಟವು ಚೆನ್ನಾಗಿ ಪಚನವಾಗುವುದಲ್ಲದೆ ಅಗ್ನಿ ಪ್ರದೀಪ್ತವಾಗುತ್ತದೆ. ಕಂಠದೋಷವು ಪರಿಹಾರವಾಗುತ್ತದೆ. ಆದರೆ ಕೆಮ್ಮು, ಪಾಂಡು, ಮೂತ್ರಕೃಚ್ಛ್ರ, ರಕ್ತಪಿತ್ತ, ವ್ರಣ, ಜ್ವರ, ದಾಹ, ರೋಗವಿರುವವರು ಗ್ರೀಷ್ಮ ಮತ್ತು ಶರದೃತುಗಳಲ್ಲಿ ಶುಂಠಿಯನ್ನು ತಿನ್ನುವುದು ಹಿತಕಾರಿಯಲ್ಲ.

ವಿ. ಸೂ. ಹಸಿಶುಂಠಿಯು ತಾಳಿಕೆ ಬರುವುದಿಲ್ಲ; ಬೇಗ ಕೆಟ್ಟು ಹೋಗುತ್ತದೆ. ಆದುದರಿಂದ ಹಸಿಶುಂಠಿಗೇ ಒಂದು ಸಂಸ್ಕಾರವನ್ನು ಕೊಟ್ಟು ಒಣಶುಂಠಿಯನ್ನು ಸಿದ್ಧಗೊಳಿಸುತ್ತಾರೆ. ಇದು ಇಟ್ಟರೆ ಕೂಡಲೇ ಕೆಡುವುದಿಲ್ಲ.

## ಇತರ ಕೆಲವು ಔಷಧ ದ್ರವ್ಯಗಳ ಗುಣಧರ್ಮಗಳು

**219. ಜೇನುತುಪ್ಪ**—ಆಯುರ್ವೇದಶಾಸ್ತ್ರದ ರೀತಿಯಲ್ಲಿ ಜೇನುತುಪ್ಪವು ವಾತಕಾರಕವೂ, ಗುರುವೂ,ಶೀತಲವೂ,ರಕ್ತಪಿತ್ತ ಮತ್ತು ಕಫನಾಶಕವೂ ಆಗಿರುತ್ತದೆ. ಅಲ್ಲದೆ ಇದು ಸಂಧಾನಕರವೂ, ಛೇದಕವೂ, ರೂಕ್ಷವೂ, ಕಷಾಯವೂ ಮತ್ತು ಮಧುರವೂ ಕೂಡ ಆಗಿದೆ. ಆದರೆ ಇದು ಸಾಮಾನ್ಯವಾದ ಜೇನುತುಪ್ಪದ ಗುಣ. ಇದರಲ್ಲಿ ಭಿನ್ನಭಿನ್ನವಾದ ಪೌತ್ತಿಕಮಧು, ಭ್ರಮರಮಧು, ಕ್ಷುದ್ರಮಧು, ಮಾಕ್ಷಿಕ ಮಧು, ಛಾತ್ರಮಧು, ಅದ್ದಾಲಕಮಧು, ಆರ್ಘ್ಯಮಧು, ಶರ್ಕರಾಮಧು, (ಮಧುಶರ್ಕರಾ) ಪುರಾತನಮಧು, ನವೀನಮಧು, ಪಕ್ವಮಧುಗಳೆಂಬ ಬೇರೆ ಬೇರೆ ಜೇನುತುಪ್ಪಗಳನ್ನು ಹೇಳಿದ್ದಾರೆ. ಆದರೆ ಬಹುತೇಕ ಮೂಲ ಗುಣಧರ್ಮಗಳಲ್ಲಿ ಮಾತ್ರ ಇವುಗಳಲ್ಲಿ ವಿಶೇಷ ವ್ಯತ್ಯಾಸವೇನೂ ಇಲ್ಲ. ಮೂಲತಃ ಇವುಗಳೆಲ್ಲವೂ ಲೇಖನವೂ, ದೀಪನವೂ, ಗ್ರಾಹಿಯೂ ಚಕ್ಷುಷ್ಯವೂ, ಸ್ವರ್ಯವೂ, ವೃಷ್ಯವೂ, ಮೇಧ್ಯವೂ, ವ್ರಣಶೋಧಕವೂ, ವ್ರಣರೋಪಕವೂ, ಕೂಡ ಆಗಿರುತ್ತದೆಂದು ಹೇಳಲಾಗಿದೆ. ಆದುದರಿಂದಲೇ ಜೇನುತುಪ್ಪವನ್ನು ವಿಶ್ವವ್ಯಾಪಿಯಾಗಿ ಬಹುಶ್ರೇಷ್ಠವಾದ ಆಹಾರ ವಸ್ತುವಾಗಿ ಪರಿಗಣಿಸಲಾಗಿದೆ. ಶುದ್ಧಮಧುವು ಅಮೃತಕ್ಕೆ ಸಮಾನ.

**220. ಹಾಲು**—(ದುಗ್ಧವು) ಹಾಲು ಸುಮಧುರವೂ, ಸ್ನಿಗ್ಧವೂ, ವಾತಪಿತ್ತಹರವೂ, ವೀರ್ಯವೃದ್ಧಿಕರವೂ, ಬಲದಾಯಕವೂ, ಮೇಧ್ಯವೂ ಮತ್ತು ವಾಜೀಕರಣವೂ ಆಗಿದ್ದು ಆಯುಸ್ಸನ್ನೂ ಯೌವನವನ್ನು ಉಂಟುಮಾಡುವ ಜೀವನಾಧಾರವಾದ ವಸ್ತುವಾಗಿದೆ. ಇದು ರೋಗಿಗಳಿಗೂ, ನಿರೋಗಿಗಳಿಗೂ, ಅಶಕ್ತರಿಗೂ, ಶಕ್ತರಿಗೂ, ದೊಡ್ಡವರಿಗೂ, ಚಿಕ್ಕವರಿಗೂ ಹೀಗೆ ಎಲ್ಲರಿಗೂ, ಆರೋಗ್ಯವನ್ನೀಯುವ ಅಮೃತವೇ ಆಗಿದೆ.

ಹಾಲುಗಳಲ್ಲಿ ಹಸುವಿನ ಹಾಲು, ಅತಿಶ್ರೇಷ್ಠ; ಬೇರೆ ಬೇರೆ ಬಣ್ಣದ ಹಸುಗಳ ಹಾಲಿನಲ್ಲಿ ಕರಿಯ ಹಸುವಿನ ಹಾಲೇ ಶ್ರೇಷ್ಠವೆಂದು ಹೇಳಿದರೂ ಬಹುತೇಕ ಎಲ್ಲ ಹಸುಗಳ ಹಾಲೂ ಗುಣಮಟ್ಟದಲ್ಲಿ ತುಸು ಹೆಚ್ಚುಕಡಿಮೆ ಒಂದೇ ಎಂದೆನ್ನಬಹುದು. ಎಮ್ಮೆಯ ಹಾಲು ಸುಲಭವಾಗಿ ಜೀರ್ಣವಾಗುವುದಿಲ್ಲ. ಮೇಕೆ, ಕುರಿಗಳ ಹಾಲು ಸುಲಭವಾಗಿ ಜೀರ್ಣವಾಗುತ್ತವೆ. ಹೀಗೆ ಪ್ರತಿಯೊಂದು ಹಾಲಿನಲ್ಲೂ ಕೆಲಮಟ್ಟಿಗೆ ವ್ಯತ್ಯಾಸಗಳಿದ್ದರೂ ಹಾಲು ಹಾಲೇ ಎಂದಿಷ್ಟೇ ಹೇಳುವುದು ಸೂಕ್ತವೆಂದೆನಿಸುತ್ತದೆ. ಶಾಸ್ತ್ರಕಾರರು **"ಧಾರೋಷ್ಣಂ ಅಮೃತಂಸಮಂ"** ಎಂದು ಹೇಳಿಬಿಟ್ಟಿದ್ದಾರೆ. ಎಂದರೆ ಆಗಲೇ ಕರೆದ ನೊರೆ ಹಾಲು ಅಮೃತಸಮಾನ ಎಂದು. ಹೀಗೆ ಒಂಟೆ, ಆನೆ, ಕುದುರೆ, ಕತ್ತೆ, ಜಿಂಕೆ ಮೊದಲಾದ ಪ್ರತಿಯೊಂದು ಪ್ರಾಣಿಗಳ ಹಾಲಿನ ಗುಣಧರ್ಮಗಳಲ್ಲಿ ವ್ಯತ್ಯಾಸವಿದ್ದರೂ ಒಂದರ ಅಭಾವದಲ್ಲಿ ಇನ್ನೊಂದನ್ನು ಉಪಯೋಗಿಸಲಡ್ಡಿಯಿಲ್ಲ.

**221. ಸ್ತ್ರೀಯರ ಎದೆಹಾಲು**—ಸ್ತ್ರೀಯರ ಎದೆಹಾಲು ಲಘುವೂ ಶೀತವೂ, ದೀಪನಕಾರಿಯೂ ಮತ್ತು ವಾತಪಿತ್ತನಿವಾರಕವೂ ಆಗಿರುತ್ತದೆ. ಅಲ್ಲದೆ ಇದು ಕಣ್ಣಿನ ರೋಗ ಪರಿಹಾರಕವೂ, ಶೂಲಾ ನಿವಾರಕವೂ, ನಸ್ಯದಜೊತೆ ಸೇರಿದಾಗ ಮಸ್ತಿಷ್ಕ ರೋಗಘ್ನವೂ ಆಗಿರುತ್ತದೆ. ಇದರಿಂದ ಸ್ಥಾವರಜಂಗಮಾದಿ ವಿಷಗಳ ಪರಿಹಾರವಾಗುತ್ತದೆ; ಹುಚ್ಚು, ವಿಭ್ರಮ, ಅಪಸ್ಮಾರ, ಸನ್ನಿಪಾತ ಮೊದಲಾದ ರೋಗಗಳು ನಿವಾರಣೆಯಾಗುತ್ತವೆ. ಅಲ್ಲದೆ ಇದು ವೃಷ್ಯವೂ ಬಲ್ಯವೂ ಮತ್ತು ಕಾಂತಿದಾಯಕವೂ ಆಗಿರುತ್ತದೆ. ಶಿಶುಗಳಿಗೆ ಬೇಕಾದ ಎಲ್ಲ ಪೋಷಕ ದ್ರವ್ಯಗಳೂ ಇದರಲ್ಲಿರುತ್ತವೆ.

**222. ಮೊಸರು**—ಭಾವಪ್ರಕಾಶದಲ್ಲಿ ಹಾಲಿನ ನಂತರ ಮೊಸರಿನ ಗುಣಧರ್ಮಗಳನ್ನು ವಿವರಿಸುತ್ತಾರೆ. ಮೊಸರು ಉಷ್ಣವೂ, ದೀಪನವೂ, ಸ್ನಿಗ್ಧವೂ ಕಷಾಯವೂ ಮತ್ತು ಗುರುವೂ ಆಗಿದ್ದು ವಿಪಾಕದಲ್ಲಿ ಆಮ್ಲತೆಯನ್ನು ಹೊಂದುತ್ತದೆ. ಅಲ್ಲದೆ, ಇದು ಮೂತ್ರಕೃಚ್ಛ್ರ, ದೀರ್ಘಕಾಲದ ನೆಗಡಿ, ಶೀತ, ವಿಷಮಜ್ವರ, ಅತಿಸಾರ, ಅರೋಚಕತೆ, ಅಶಕ್ತತೆಗಳಲ್ಲೂ ಹಿತಕರವೆಂದು ಹೇಳಲಾಗಿದೆ. ಹಾಲಿನಂತೆಯೇ ಎಮ್ಮೆ, ಆಕಳು, ಮೇಕೆ ಮೊದಲಾದವುಗಳ ಮೊಸರಿನಲ್ಲೂ ಕಿಂಚಿತ್ತು ವ್ಯತ್ಯಾಸವಿದ್ದರೂ ಅದು ತೀರ ಲಕ್ಷಿಸತಕ್ಕದ್ದಲ್ಲವೆಂದೇ ತಿಳಿಯಬೇಕು. ರಾತ್ರಿ ಮೊಸರಿನ ಊಟವೇ ಆಗಲಿ ಮಜ್ಜಿಗೆಯ ಊಟವೇ ಆಗಲಿ ಅಷ್ಟು ಆರೋಗ್ಯಕರವಲ್ಲವೆಂದೇ ಹೇಳಲಾಗಿದೆ.

**223. ಮಜ್ಜಿಗೆ**—ನೀರನ್ನು ಬೆರಸದೆ ಕಡೆದು ಬೆಣ್ಣೆತೆಗೆದ ಮಜ್ಜಿಗೆಯು ಅತಿ ಆರೋಗ್ಯದಾಯಕವಾಗಿರುತ್ತದೆ. ಚತುರ್ಥಾಂಶ ನೀರು ಬೆರಸಿ ಕಡೆದು ಬೆಣ್ಣೆ

ತೆಗೆದ ಮಜ್ಜಿಗೆಯು ಬಲದಾಯಕವೂ, ವೃಷ್ಯವೂ; ಕಾಂತಿದಾಯಕವೂ ಇರುತ್ತದೆ. ಮಜ್ಜಿಗೆಯು ಸ್ವಲ್ಪ ಒಗರೂ, ಮಧುರವೂ, ಮತ್ತು ಕಿಂಚಿತ್ ಹುಳಿಯೂ ಆಗಿರುತ್ತದೆ. ಆದರಲ್ಲಿ ವಾತ, ಪಿತ್ತಗಳನ್ನು ನಿವಾರಣೆ ಮಾಡುವ ಶಕ್ತಿ ಇದೆ. ಹುಳಿ ಮಜ್ಜಿಗೆಯು ವಾಯುವನ್ನು ಶಮನಗೊಳಿಸಿ ಪಿತ್ತವನ್ನು ಹೆಚ್ಚಿಸಿದರೆ–ಸಿಹಿ ಮಜ್ಜಿಗೆಯು ಪಿತ್ತವನ್ನು ಶಮನಗೊಳಿಸಿ ಕಫವನ್ನು ಹೆಚ್ಚಿಸುತ್ತದೆ. ಸಕ್ಕರೆಯನ್ನು ಬೆರಸಿದ ಮಜ್ಜಿಗೆಯು ರಸಾಲವೆಂಬ ಹೆಸರಿನಿಂದ ಅತಿ ಉಪಯುಕ್ತವಾದ ಪೇಯವಾಗಿ ಪರಿಗಣಿಸಲಾಗಿದೆ. ಮಜ್ಜಿಗೆಯಲ್ಲಿ ದೀಪನಶಕ್ತಿ ಇದೆ; ರಸಧಾತುಗಳನ್ನು ಪೋಷಿಸುವ ಪೌಷ್ಟಿಕಾಂಶವಿದೆ. ಆದುದರಿಂದ ಇದನ್ನು ನಿತ್ಯನಿಯಮಿತವಾಗಿ ಸೇವಿಸುವುದರಿಂದ ಶರೀರಕ್ಕೆ ರೋಗನಿವಾರಕ ಶಕ್ತಿಯೂ, ಆರೋಗ್ಯವೂ ಪ್ರಾಪ್ತವಾಗುತ್ತದೆಂಬುದು ಎಲ್ಲ ಆಯುರ್ವೇದ ಆಚಾರ್ಯರುಗಳ ಅಭಿಪ್ರಾಯವಾಗಿದೆ. ಇದರಿಂದ ಮೂರ್ಛೆ, ಭ್ರಮೆ, ದಾಹ, ಅತಿಸಾರ, ಪಾಂಡು, ಸಂಗ್ರಹಣಿ, ಮೂಲವ್ಯಾಧಿ, ವಿಷಕಾರ, ಶೂಲೆ, ಬಾವು ಮೊದಲಾದ ರೋಗಗಳು ನಿವಾರಣೆಯಾಗುತ್ತವೆ. ಆಕಳು, ಎಮ್ಮೆ, ಮೇಕೆಯೇ ಮೊದಲಾದವುಗಳ ಹಾಲು ಮೊಸರುಗಳಲ್ಲಿ ಕಿಂಚಿತ್ ಭೇದವಿರುವಂತೆ ಮಜ್ಜಿಗೆಯಲ್ಲೂ ಸ್ವಲ್ಪ ವ್ಯತ್ಯಾಸವಿದೆ ಆದರೂ ಒಂದರ ಅಭಾವದಲ್ಲಿ ಇನ್ನೊಂದನ್ನು ಉಪಯೋಗಿಸಲು ಅಡ್ಡಿಯಿಲ್ಲ.

224. **ಬೆಣ್ಣೆ**—ಬೆಣ್ಣೆಯು ಶರೀರಕ್ಕೆ ಹಿತವೂ, ವೃಷ್ಯವೂ, ವರ್ಣಕಾರಕವೂ, ಶಾಮಕವೂ ಆಗಿದ್ದು ಅಗ್ನಿದೀಪನವನ್ನೂ, ಬುದ್ಧಿಶಕ್ತಿಯನ್ನೂ ಹೆಚ್ಚಿಸುತ್ತದೆ. ಹಾಲಿನ ಸಾರವೇ ಇದಾಗಿರುವುದರಿಂದ ಹಾಲಿನ ಎಲ್ಲ ಗುಣವೂ ಇದರಲ್ಲಿದೆ. ಇದು ಬಾಲಕರಿಗೂ, ವೃದ್ಧರಿಗೂ, ಯುವಕರಿಗೂ ಎಲ್ಲರಿಗೂಶಕ್ತಿದಾಯಕವಾಗಿದ್ದು ಮಕ್ಕಳಿಗಂತೂ ಅತಿ ಶ್ರೇಷ್ಠ ಆಹಾರವಾಗಿದೆ. ಹಸುವಿನ ಬೆಣ್ಣೆಗಿಂತ ಎಮ್ಮೆಯ ಬೆಣ್ಣೆಯು ಜಡ. ಬೆಣ್ಣೆಯಿಂದ ದಾಹ, ಪಿತ್ತ, ಬಳಲಿಕೆ ನಿವಾರಣೆಯಾಗುತ್ತದೆ. ಮೇದಸ್ಸು, ಶುಕ್ರಗಳ ವೃದ್ಧಿಯಾಗುತ್ತದೆ. ಇದು ಕಣ್ಣಿಗೆ ತಂಪು, ರಕ್ತಪಿತ್ತ ನಿವಾರಕ, ರುಚಿದಾಯಕ, ಮಧುರ, ಗ್ರಾಹಿ ಎನಿಸಿಕೊಂಡು ಆರೋಗ್ಯವನ್ನೂ, ಆಯುಸ್ಸನ್ನೂ, ಸ್ಮೃತಿಶಕ್ತಿಯನ್ನೂ ಉಂಟುಮಾಡತಕ್ಕ ದಿವ್ಯವಸ್ತುವೆನಿಸಿದೆ ಹಸು, ಎಮ್ಮೆ, ಮೇಕೆ ಮೊದಲಾದವುಗಳ ಬೆಣ್ಣೆಯ ಗುಣಧರ್ಮಗಳಲ್ಲೂ ಮೇಲೆಯೇ ತಿಳಿಸಿದಂತೆ ಸ್ವಲ್ಪ ವ್ಯತ್ಯಾಸ ಉಂಟು.

225. **ತುಪ್ಪ**—ತುಪ್ಪವು ರಸಾಯನವೂ, ಸ್ವಾದುವೂ, ಕಣ್ಣಿಗೆ ಹಿತವೂ ಜಠರಾಗ್ನಿಯನ್ನು ಹೆಚ್ಚಿಸುವಂತಹದೂ, ಶೀತವೀರ್ಯಯುಕ್ತವೂ ಆಗಿದ್ದು ವಿಷವನ್ನೂ, ಪಿತ್ತವನ್ನೂ, ವಾತವನ್ನೂ ಪರಿಹರಿಸುತ್ತದೆ. ಇದರಿಂದ ಬಲ, ಆಯುಸ್ಸು, ಓಜಸ್ಸುಗಳ ವೃದ್ಧಿಯಾಗುವುದಲ್ಲದೆ ಉನ್ಮಾದ, ವಿಭ್ರಮೆ, ಕ್ಷಯ

ಧಾತುವಿಕಾರ, ವಾತಪಿತ್ತ, ಅಸ್ಥಿಗತ ಜ್ವರಾದಿಗಳೂ ಪರಿಹಾರವಾಗುತ್ತವೆ. ಭೂತ ಬಾಧೆಯನ್ನೂ ಗ್ರಹಪೀಡೆಯನ್ನೂ ಪರಿಹರಿಸುವ ಶಕ್ತಿ ತುಪ್ಪಕ್ಕಿದೆ.ಸ್ವಾಭಾವಿಕವಾಗಿ ಹಾಲು, ಮೊಸರು. ಮಜ್ಜಿಗೆ, ಬೆಣ್ಣೆ, ತುಪ್ಪ ಎಂದಾಗಲೆಲ್ಲಾ ಹಸುವಿನದು ಎಂದೇ ತಿಳಿಯಬೇಕು. ಇಲ್ಲೂ ಎಮ್ಮೆ, ಮೇಕೆ, ಕುರಿಗಳ ತುಪ್ಪದಲ್ಲಿ ಹಿಂದೆಯೇ ತಿಳಿಸಿರುವಂತೆ ಕಿಂಚಿತ್ ಗುಣಧರ್ಮಗಳಲ್ಲಿ ಬದಲಾವಣೆಗಳಿದ್ದರೂ ಮೂಲಧರ್ಮ ಗಳಲ್ಲಿ ಹೆಚ್ಚಿನದೇನೂ ಬದಲಾವಣೆ ಇಲ್ಲ. ಆದ್ದರಿಂದ ಒಂದರ ಅಭಾವದಲ್ಲಿ ಇನ್ನೊಂದು ತುಪ್ಪವನ್ನು ಅತಿ ಆಪತ್ಕಾಲದಲ್ಲಿ ಉಪಯೋಗಿಸಲಡ್ಡಿಯಿಲ್ಲ. ಬಾಹ್ಯೋಪಚಾರದಲ್ಲಿ ಅತಿ ಹಳೆಯ ತುಪ್ಪವು ಅತಿ ಶ್ರೇಷ್ಠವೆಂದು ಪರಿಗಣಿಸಲಾಗಿದೆ.

226. **ಗೋಮೂತ್ರ**—ಹಾಲು, ತುಪ್ಪ, ಮೊಸರು, ಬೆಣ್ಣೆಗಳಂತೆಯೇ ಗೋಮೂತ್ರವೂ ಕೂಡ ಔಷಧ ದ್ರವ್ಯವಾಗಿದೆ. ಇದು ಕಟುವೂ, ತೀಕ್ಷ್ಣವೂ, ಉಷ್ಣವೂ, ಕ್ಷಾರವೂ, ಆಗಿದ್ದು ಕಫನಾಶಕವಾಗಿದೆ. ಅಲ್ಲದೆ ಇದು ಅಗ್ನಿವೃದೀ ಪಕವೂ, ಮೇಧ್ಯವೂ, ಪಿತ್ತ, ಶ್ಲೇಷ್ಮ, ವಾತನಾಶಕವೂ ಹೌದು. ಇದರಿಂದ ಶೂಲೆ, ಗುಲ್ಮ, ಉದರಬಾಧೆ, ಆನಾಹ, ಕಂಡೂ; ನೇತ್ರರೋಗ, ಮುಖ ರೋಗಾದಿಗಳೂ ಪರಿಹಾರವಾಗುತ್ತವೆ. ಕುಷ್ಠ, ಕಾಸ, ಅತಿಸಾರ, ಮೂತ್ರಾವರೋಧ ಕ್ರಿಮಿರೋಗ, ಪಾಂಡು ಮೊದಲಾದ ದುರ್ಧರ ರೋಗಗಳು ಗೋಮೂತ್ರ ಒಂದನ್ನೇ ಪ್ರತಿದಿನ ಕುಡಿಯುವುದರಿಂದ ನಿವಾರಣೆಯಾಗುತ್ತವೆ. ಎಲ್ಲ ಪ್ರಾಣಿಗಳ ಮೂತ್ರಕ್ಕಿಂತ ಗೋಮೂತ್ರದಲ್ಲಿ ರೋಗನಿವಾರಕ ಶಕ್ತಿಯು ವಿಶೇಷವಾಗಿದೆ ಎಂದು ತಿಳಿಯಲಾಗಿದೆ. ಇದರಿಂದ ಕರ್ಣಶೂಲೆಯು ಗುಣವಾಗುತ್ತದೆ; ಕಾಮಾ ಲೆಯು ಪರಿಹಾರವಾಗುತ್ತದೆ. ರೋಗಚಿಕಿತ್ಸೆಯಲ್ಲಿ ಬೇರೆ ಬೇರೆ ಪ್ರಾಣಿಗಳ ಮೂತ್ರ ವನ್ನು ಉಪಯೋಗಿಸುವ ವಿಧಿ ವಿಧಾನವನ್ನು ಹೇಳಲಾಗಿದೆ. ಆದರೆ ಯಾವ ಮೂತ್ರವನ್ನೇ ಆದರೂ ಚೆನ್ನಾಗಿ ಶೋಧಿಸಿಯೇ ಉಪಯೋಗಿಬೇಕೆಂಬುದನ್ನು ಮರೆಯಬಾರದು.

227. **ಮನುಷ್ಯಮೂತ್ರ**—ನರಮೂತ್ರ ಸೇವನೆಯಿಂದ ಅನೇಕ ರೋಗಗಳು ನಿವಾರಣೆಯಾಗುವುದಲ್ಲದೆ ಅದು ರಸಾಯನವಾಗಿಯೂ ಇರುತ್ತದೆ. ಇದರಿಂದ ರಕ್ತದೋಷ ಸಂಬಂಧವಾದ ಪಾಮಾಗಳೇ ಮೊದಲಾದ ರೋಗಗಳು ನಿವಾರಣೆಯಾಗುವುವಲ್ಲದೆ ಇದು ತೀಕ್ಷ್ಣವೂ, ಕ್ಷಾರಯುಕ್ತವೂ, ಲವಣ ಮಿಶ್ರಿತವೂ ಆಗಿರುತ್ತದೆಯೆಂದು ಕೂಡ ಹೇಳಲಾಗಿದೆ.

**ವಿ. ಸೂ.** ಇತ್ತೀಚೆಗೆ ಸ್ವಮೂತ್ರ ಪ್ರಯೋಗದ ಬಗ್ಗೆ ಅನೇಕ ಜಿಜ್ಞಾಸೆಗಳು ಎದ್ದಿವೆ. ಅನೇಕರು ಸ್ವಮೂತ್ರ ಪ್ರಯೋಗದಿಂದ (ತಮ್ಮ ಮೂತ್ರವನ್ನು

ತಾವೇ ಕುಡಿಯುವುದು) ತಮ್ಮ ದುರ್ಧರವಾದ ರೋಗಗಳು ನಿವಾರಣೆಯಾಗಿರುವುದಲ್ಲದೇ ತಾವು ಪೂರ್ಣ ಆರೋಗ್ಯವಾಗಿರುವೆವೆಂದು ತಿಳಿಸುತ್ತಾರೆ; ಇಂತಹ ಹಲವು ಉದಾಹರಣೆಗಳುಂಟು. ಆದರೆ ಇತ್ತೀಚಿಗೆ ಅನೇಕ ಡಾಕ್ಟರುಗಳೂ, ವಿಜ್ಞಾನಿಗಳೂ ಕೂಡ ಸ್ವಮೂತ್ರ ಪ್ರಯೋಗವು ತೀರ ಹುಚ್ಚುತನ; ಯಾರೋ ಸಮಾಜದಲ್ಲಿ ದೊಡ್ಡವರೆಂದೆನಿಸಿಕೊಂಡವರು ನಾಲ್ಕು ಜನ ಅದು ಒಳ್ಳೆಯದೆಂದು ಹೇಳಿದುದರಿಂದ ಎಲ್ಲರೂ ಹಾಗೆನ್ನತೊಡಗಿದ್ದಾರೆ ಎಂದು ಪ್ರತಿವಾದಿಸಿದ್ದಾರೆ. ಆದರೂ ಇದರ ಸಂಬಂಧವಾಗಿ ವೈಜ್ಞಾನಿಕವಾದ ಸಂಶೋಧನೆ ನಡೆಯುವುದು ಅಗತ್ಯವೆಂದೆನಿಸುತ್ತದೆ. ಆದರೆ ಭಾವಮಿಶ್ರರು ತಮ್ಮ ಭಾವಪ್ರಕಾಶ ನಿಘಂಟು ವಿನಲ್ಲಿ ಸ್ಪಷ್ಟವಾಗಿ ಇದರ ಸಂಬಂಧವಾಗಿ ಮೆಚ್ಚುಗೆಯ ಮಾತುಗಳನ್ನೇ ಆಡಿರುವುದು ಇಲ್ಲಿ ಗಮನಿಸತಕ್ಕ ವಿಚಾರವಾಗಿದೆ.

**228. ಗೋರೋಜನ**–ಗೋರೋಜನವು ತ್ರಿದೋಷ ಪರಿಹಾರಕವಾಗಿದ್ದು ದೀಪನವೂ, ಪಾಚನವೂ ಆಗಿರುತ್ತದೆ ಇದು ಶೀತಜನ್ಯ ರೋಗಗಳ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ಶೂಲಘ್ನವಾದ ಗೋರೋಜನವು ಸ್ತ್ರೀಯರ ಮಟ್ಟುಕಟ್ಟನ್ನು (ಸೂತಕಶೂಲೆ) ನಿವಾರಿಸುವುದಲ್ಲದೆ ಗರ್ಭಕೋಶದ ದೋಷವನ್ನೂ, ವಂಧ್ಯತ್ವವನ್ನೂ ನೀಗುತ್ತದೆ; ಬಾಣಂತಿಯರ ರೋಗವನ್ನೂ ಪರಿಹರಿಸುತ್ತದೆ. ಚಿಕ್ಕಮಕ್ಕಳ ಎಳವುರೋಗ ಮತ್ತು ಬಾಲಗ್ರಹಗಳ ಮೇಲೆ ಗೋರೋಜನವು ಬಹಳ ಸತ್ಪರಿಣಾಮವನ್ನುಂಟುಮಾಡುತ್ತದೆ. ಗೋರೋಜನವು ಗೋವುಗಳ ಪಿತ್ತಾಶಯದಲ್ಲಿ ಉತ್ಪನ್ನವಾಗುತ್ತದೆ. ಮೈಲಿಬೇನೆಯ ಮೇಲೆ ಗೋರೋಜನವು ಒಳ್ಳೆಯ ಪರಿಣಾಮಕಾರಿಯಾದ ಕೆಲಸವನ್ನು ಮಾಡುತ್ತದೆ.

**229. ಪಂಚಲವಣ**—ಇದರಲ್ಲಿ ಸೌವರ್ಚಲವಣಕ್ಕೆ ಏಕಲವಣವೆಂದೂ, ಸೌವರ್ಚಲವಣ ಮತ್ತು ಸೈಂಧವಲವಣಸೇರಿ ದ್ವಿಲವಣವೆಂದೂ, ಈ ಎರಡರಜೊತೆಗೆ ಬಿಡಾಲವಣ ಸೇರಿದರೆ ತ್ರಿಲವಣವೆಂದೂ, ಈ ಮೂರರ ಜೊತೆಗೆ ಚೌಳುಪ್ಪು ಸೇರಿದರೆ ಚತುರ್ಲವಣವೆಂದೂ, ಈ ನಾಲ್ಕರ ಜೊತೆಗೆ ಸಮುದ್ರಲವಣ ಸೇರಿದರೆ ಪಂಚಲವಣವೆಂದೂ ಹೆಸರಿಸಲಾಗಿದೆ. ಈ ಪಂಚಲವಣವು ವಿಪಾಕದಲ್ಲಿ ಸಿಹಿಯಾಗಿದ್ದು ಮೂತ್ರಲವೂ, ವಿರೇಚಕವೂ, ಆಗಿರುತ್ತದೆ, ಅಲ್ಲದೆ ಇದು ಉಷ್ಣವೀರ್ಯವಿದ್ದು ದೀಪನಕಾರಿಯಾಗಿದೆ; ಅಗ್ನಿಶಕ್ತಿಯನ್ನು ಹೆಚ್ಚಿಸುತ್ತದೆ. ಶ್ಲೇಷ್ಮಘ್ನವಾಗಿದ್ದು ಪಿತ್ತಪ್ರಕೋಪವನ್ನುಂಟುಮಾಡುತ್ತದೆ. ತೀಕ್ಷ್ಣವಾಗಿದ್ದು ಶೂಲಹರವೂ, ಕ್ರಿಮಿನಾಶಕವೂ ಆಗಿರುತ್ತದೆ; ಅಲ್ಪಪ್ರಮಾಣದಲ್ಲಿ ಸೇವಿಸಿದರೆ ಗರ್ಭಾಶಯದ ವಿಕಾರವನ್ನು ಪರಿಹರಿಸುತ್ತದೆ; ಹೆಚ್ಚಿನ ಪ್ರಮಾಣದಲ್ಲಿ ಸೇವಿಸಿದರೆ ಪಿತ್ತವನ್ನು ಕೆರಳಿಸಿ ವಮನವನ್ನುಂಟುಮಾಡುತ್ತದೆ.

**230. ಕ್ಷಾರಗಳು**—ಸರ್ಜಕ್ಷಾರ ಮತ್ತು ಯವಕ್ಷಾರಗಳು ಸೇರಿ ಕ್ಷಾರ ದ್ವಯವೆಂದು ಹೆಸರಿಸವಾಗಿದೆ. ಇವುಗಳೆರಡೂ ಅತಿ ತೀಕ್ಷ್ಣ ದ್ರವ್ಯಗಳಾಗಿರುತ್ತವೆ. ಇವುಗಳ ಜೊತೆಗೆ ಟೆಂಕಣಕ್ಷಾರ ಸೇರಿದರೆ ಕ್ಷಾರತ್ರಯವೆನಿಸುವುದು. ಬಹುತೇಕ ಕ್ಷಾರಗಳೆಲ್ಲವೂ ತೀಕ್ಷ್ಣವೆಂದೇ ತಿಳಿಯಬೇಕು. ಇವುಗಳಲ್ಲಿ ಮೂಲವ್ಯಾಧಿ, ಗುಲ್ಮ, ಸಂಗ್ರಹಣಿ, ಕ್ರಿಮಿಬಾಧೆಯನ್ನು ನಿವಾರಣೆಮಾಡುವ ಶಕ್ತಿ ಇದೆ; ಆದರೆ ಹೆಚ್ಚಿನ ಪ್ರಮಾಣದಲ್ಲಿ ದೀರ್ಘಕಾಲ ಸೇವಿಸಿದರೆ ಪುಂಸತ್ವವನ್ನು ನಾಶಪಡಿಸುತ್ತವೆ. ಇದರಲ್ಲಿ ಅಶ್ಮರೀರೋಗವನ್ನು (ಮೂತ್ರದ್ವಾರದಲ್ಲಿಯ ಕಲ್ಲು) ಮತ್ತು ಮೂತ್ರಕೃಚ್ಛ್ರವನ್ನೂ ಪರಿಹರಿಸುವ ಶಕ್ತಿ ಇದೆ.

**231. ಅಷ್ಟವರ್ಗ**—ಇದು ಶೀತಲವೂ, ಸ್ವಾದಕರವೂ, ಬ್ರಂಹಣವೂ (ಬಲ್ಯ), ವೀರ್ಯವರ್ಧಕವೂ ಆಗಿದ್ದು ಗುರುವೂ, ಭಗ್ನಸಂದಾನಕಾರಕವೂ, ಕಾಮೋತ್ತೇಜಕವೂ, ಶಕ್ತಿದಾಯಕವೂ ಆಗಿರುತ್ತದೆ. ಅಲ್ಲದೆ ಇದರಿಂದ ವಾತ, ಪಿತ್ತ, ಕಫಾಧಿಗಳೂ ಜ್ವರವೂ, ದಾಹವೂ, ಕ್ಷಯವೂ, ಕೂಡನಿವಾರಣೆಯಾಗುತ್ತದೆ ಜೀವಕ, ಋಷಭಕ, ಮೇದಾ, ಮಹಾಮೇದಾ, ಕಾಕೋಳಿ, ಕ್ಷೀರಕಾಕೋಳಿ, ಋದ್ಧಿ, ವೃದ್ಧಿ, ಈ ಎಂಟು ದ್ರವ್ಯಗಳು ಸೇರಿ ಅಷ್ಟವರ್ಗವೆಂದಾಗಿದೆ. ಈಗ ಮೇಲೆ ಹೇಳಿರುವುದು ಈ ಎಂಟು ದ್ರವ್ಯಗಳ ಒಟ್ಟು ಮೊತ್ತದ ಗುಣಧರ್ಮಗಳೆಂಬುದನ್ನು ಮರೆಯಬಾರದು. ಇವುಗಳ ಒಂದರ ಅಭಾವದಲ್ಲಿ ಇನ್ನೊಂದುಇದೇ ವರ್ಗಕ್ಕೆ ಸೇರಿದ ವಸ್ತುವನ್ನು ಸೇರಿಸಲಡ್ಡಿಯಿಲ್ಲ. (ಉದಾಹರಣೆಗೆ ಕ್ಷೀರಕಾಕೋಳಿಯ ಬದಲು ಮಹಾಮೇದಾ; ಕಾಕೋಳಿಯ ಬದಲು–ಕ್ಷೀರ ಕಾಕೋಳಿ.)

# ವನೌಷಧಿಗಳ ಶಬ್ದಕೋಶ

| | ಕನ್ನಡ | ಸಂಸ್ಕೃತ | ಹಿಂದಿ |
|---|---|---|---|
| 1. | ಅಣಲೇಕಾಯಿ ಅಳಿಲೇಕಾಯಿ | ಹರೀತಕೀ | ಹರ್, ಹರಡ್, ಹಡ್ |
| 2. | ಅತಿವಿಡೆ, ಅತಿವಿಷ ಅತಿಬಜೆ | ಅತಿವಿಷ, ಶೃಂಗೀ ಶುಕ್ಲಕಂದ | ಅತೀಸ್ |
| 3. | ಅತಿಮಧುರ, ಜ್ಯೇಷ್ಠಮಧು | ಮಧುಕ, ಯಷ್ಟಿಮಧು | ಜೇಠೀಮಧು, ಮುಲೇಠೀ |
| 4. | ಅಮೃತಬಳ್ಳಿ ಅಮರದಬಳ್ಳಿ | ಗುಡೂಚಿ, ಅಮೃತಾ, ಮಧುಪರ್ಣಿ | ಗಿಲೋಯ್, ಗುಡೀಚ |
| 5. | ಅತ್ತಿ | ಔದುಂಬರ, ಯಜ್ಞಾಂಗ, ಹೇಮದುಗ್ಧಕ, ಸದಾಫಲ, | ಗೂಲರ್, ಪರೋವ, ಕಾಕಮಾಲ್, ಗೂಲಡ್ |
| 6. | ಅಕ್ರೋಡ, ಅಕ್ರೋಟ | ಅಕ್ಷೋಟ, ಪಾರ್ವತೀಯ ರೇಖಾಫಲ | ಅಖರೋಟ್, ಕೆಕ್ಷೋಟ್ ಪಹಾಡೀಪೀಲು |
| 7. | ಅಂಟವಾಳ | ಅರಿಷ್ಟಕಃ, ಗರ್ಭಪಾತನಃ | ರೀಠಾ, ಅರೀಠಾ |
| 8. | ಅರಳೀಮರ,ಅಶ್ವತ್ಥ | ಅಶ್ವತ್ಥ, ಪಿಪ್ಪಲ, ಚಲಪತ್ರ | ಪೀಪಲ್, ಪೀಪರ್, ಭೋರೆ |
| 9. | ಅರಿಸಿನ | ಹರಿದ್ರ, ಮೇಹಘ್ನಿ | ಹಲದಿ, ಹರದಿ |
| 10. | ಅಜಮೋದಾ (ದೊಡ್ಡ ಓಮ) | ಅಜಮೋದ, ಹಸ್ತಿ ಮಯೂರ, ಖರಾಶ್ವ, ಲೋಚಮರ್ಕಟ | ಅಜಮೋದ |

| ತಮಿಳು | ತೆಲುಗು | ಇಂಗ್ಲೀಷ್ |
|---|---|---|
| ಕರಕ್ಕೈ, ಕಡಕ್ಕೈ, ಕಡುಕೇಮರಮ್ | ಕರಕಚೆಟ್ಟು, ಕರಕಾಪ್ಪು, ಕರಕಾಮ್ | ಹರಿಡಾ, ಹರಿಹಾ, ಹರಿರಾ, |
| ಅತಿವದಯಮ್ | ಅತಿವಿಷ | ಇಂಡಿಯನ್ ಅತೀಸ್ |
| ಅತಿಮಧುರಂ | ಯಷ್ಟಿಮಧುಕಸು, ವೀಷ್ಟ ಮೂಲ ವಿಶೇಷಮು | ಲಿಕೆರಿಸ್ ರೂಟ್ |
| ಸಿಂದೀಲಕೋದೀ, ಶಿಂದಿಲಕೋಡಿ | ತಿಪ್ಪಕಾಗೆ, ತಿಪ್ಪತಿಗ್ಗ, ಗೋಧುಚಿ | ಹಾರ್ಟಲೀವ್ಡ್ ಮೂರ್ನೀಡ್ ರೆ: Tinosprea Cordifolia |
| ಅತ್ತಿಮರವ್, ಅತ್ತಿ | ಅತ್ತಿಚೆಟ್ಟು; ಮೇಡಿಚೆಟ್ಟು | ಕ್ಲಸ್ಟರ್‌ಫಿಗ್, ಕಂಟ್ರಿಫಿಗ್ |
| | ಅಕ್ಷೋಲಮು, ಕೋಂಡ್ ಗೋಗುಮು | ವಾಲ್‌ನಟ್ |
| ಪೊನ್ನಾನ ಕೋಟ್ಟಯೀ | ರೀಠಾಕರಂಜ್, ಮನೆಚೆಟ್ಟು | Soap Nut Tree ಸೋಪ್ ನಟ್ ಟ್ರೀ |
| ಅರಶಮರ ಮ್, ಅರಸ, ಅಶ್ವರ್‌ಥ | ಅಸ್ವಲತಾ, ಅರಲೀ, ಹಸ್ವೇಥ | ಸೇಕ್ರೆಡ್‌ಫಿಗ್; ಪೀಪಲ್ ಟ್ರೀ |
| ಮಂಜಲ | ಪಸಂಪು, ಪಾಸಂಪು | ಟಮೆರಿಕ್ Turmeric |
| ಅಶಮ, ತಾಗಮ್, ಅಶಮಂತಾ ಒಮಾನ್ | ಅಜಮೋದಾ, ಓವಮ್ | ಸೆಲೆರಿಸೀಡ್ಸ |

| ಕನ್ನಡ | ಸಂಸ್ಕೃತ | ಹಿಂದಿ |
|---|---|---|
| 11. ಅಶ್ವಗಂಧಿ, ಹಿರೇಮದ್ದಿನಬೇರು | ಅಶ್ವಗಂಧ, ಬಾಜಿಕರೀ, ಕಂಚುಕ, ಪುಷ್ಟಿದಾ | ಅಸಗಂಧ, ನಾಗೋರೀ |
| 12. ಅಕ್ಕಲಕರ, ಅಕಳಕರೆ | ಅಕರಕರಭ, ತೀಕ್ಷ್ಣ ಮೂಲ, ಅಕರಕರ, ಕರಹಾಟಃ | ಅಕರಕರ್, ಅಕಲಕರಹಾ |
| 13. ಅರಣಿ, ನರವಲು; ನರಹುಲಿ, ಹೊಸಲಕ್ಕಿ | ಅಗ್ನಿಮಂಥ, ಅರಣೀ, ವಿಜಯಂತಿಕಾ, ಕೇತುಃ | ಅರಣಿ, ಅಗೆಥು, ಗನಿಯಾರ್ |
| 14. ಅಫೀಮು | ಅಹಿಫೇನ, ಅಫೀಮು, ಖಸಫಲಕ್ಷೀರ, ಚಾರಣ | ಅಫೀಮ್, ಅಮಲ್, ಅಫಯೂನ |
| 15. ಅಗರು, ಕೃಷ್ಣಾಗರು, ಅಗಿಲುಗಂಧ | ಅಗುರು, ಕೃಷ್ಣಾಗರು | ಅಗರ್, ಕಾಲೀಅಗರ್ |
| 16. ಅಂಕುಲೆ, ಅಂಕೋಲೆ, ಕಂಕೋಲ | ಪಿಲವಾಲುಕ, ಅಂಕೋಲ, ಅಂಕೋಟ, ಕೋಲಕ್, ವಿಷಘ್ನ | ಅಂಕೋಲ್, ಅಂಕೋಡ್ ಢೇರಾ, ಅಕೋಲಾ |
| 17. ಅಗಳತುಂಬಿ, ಪಾಠಾ, ವಳಿಗಡ್ಡೆ, ಹಾಡೇಬಳ್ಳಿ | ಪಾಠಾ | ಪಾಠಾ, ಪುರಯಿನ್; ಪಾಢೀ, ಪುರಯಿನ್ ಪಾಠೀ |
| 18. ಅನಂತನಗೊಂಡೆ, ಬೋಳದರಗ | ಮುಂಡೀ ಮುಂಡೀಕಾ | ಮುಂಡೀ, ಮುರಲೀ, ಗೋರಖಮುಂಡೀ |
| 19. ಅನಂತಮೂಲ, ಸುಗಂಧಿಬೇರು, ಸೊಗದೇಬೇರು, ನಾಮದಬೇರು, (ಕರಿಯದು) | ಅನಂತಾ, ಸಾರಿವಾ, ಕೃಷ್ಣಸಾರಿವಾ | ಕಾಲೀಸರ್, ಸಾಲಸಾ, ಕರಿಯಾಸಾವ್ರಾ |
| 20. ಅನಂತಮೂಲ, (ಬಿಳಿಯದು) | ಶ್ವೇತಶಾರಿವಾ, ಧವಲಶಾರಿವಾ | ಗೌರೀಸರ್, ಗೌಡಿಯಾಸಾವ್ರಾ |

| ತಮಿಳು | ತೆಲುಗು | ಇಂಗ್ಲೀಷ್ |
|---|---|---|
| ಅಶ್ವಗಂಧಿ, ಮುಲಾ, ಚಿವರ, | ಪೈನ್ನೆರುಗಡ್ಡ, ಪಿಲ್ಲಿ ಅಂಡಾ, ಅಶ್ವಗಂಧಿ | ವಿಂಟರ್ ಚೆರಿ |
| ಅಕ್ಕಿರಕಾರವಮ್ | ಅಕಲಕರಾ | ಪೆಲಿಟರೀರೂಟ್ |
| ಇರುಮ್ಬೈಮುಲ್ಲಯಿ, ಮುನ್ನೈ | ನೆಲ್ಲಿಚೆಟ್ಟು ಫೆಟುನೆಲ್ಲಿ, ಪಿನುಅನೆಲ್ಲಿ | (ಲೆಟಿನ್) ಪ್ರೇಮ್ನ ಇಂಟೆಗ್ರಿಫೋಲಿಯಾ |
| ಅಫೀಮು | ನಲಮಂಡು, ನಲ್ಲಮಂದು | ಓಪಿಯಮ್, Opium |
| ಅಗ್ಗಲೀಚಂಡ, ಕೃಷ್ಣಾಗರು | ಕೃಷ್ಣಾಗರು, ಹರಿಗುಪ ಚೆಟ್ಟು | ಈಗಲ್‌ವುಡ್, Eagle Wood |
| ಅಲಂಗೀ | ಉಡಿಕೇ, ಉಡುಗು, ಅಂಕೋಲಮು | ಸೇಜ್‌ಲೀವ್ ಅಲೆಂಜಿಯಮ್ |
| ಪಾಡಾ | ಚಿರಬುಯಿ | ಲೆಟಿನ್-ಸಿಸ್ಸಾಮ್‌ಪೆಲೊಸ್ ಪರೆಯಿರಾ, ಸ್ಟೆಫಾನಿಯಾ ಹರಸಂಧೀಪೋಲಿಯಾ |
| ಕೋಟ್ಟೈಕ, ಕೋಟ್ಟೈಕ ಕರಂಡಯಿ | ಬೋಡ್‌ಸರವು ಚೆಟ್ಟು, ಬೋಡಾತರಪು | (ಲೆಟಿನ್-ಸ್ಫೆರನ್‌ಥಸ್ ಇಂಡಿಕಸ್–Sphaeranthus Indicus) |
| ನೀಲತಿಗ | ನಲತಿಗ | (ಲೆಟಿನ್–Ichnocarpus Frutescens) |
| ನನ್ನಾರೀ | ಪಲಾಸ್‌ಗಂಧೀ, ಪಾಲಸುಗಂಧೀ | ಇಂಡಿಯನ್ ಸಾರಸಾಪ್ರಿಲ್ಲ Indian–Sarsaprilla |

| ತಮಿಳು | ತೆಲುಗು | ಇಂಗ್ಲೀಷ್ |
|---|---|---|
| ಗಳಾಕ್ಕಾ | ಅವೋಟಿಂ. ಅಂಬಾಲಮು | ಹೌಗ್‌ಪ್ಲಮ್ (Hogplum) |
| ಕಿರಮುಕಂ, ಪಾಕಂ | ಪೋಕಾಕಾಯಾ ಕ್ರಮುಕಮು, ಪೋಕ | ಬೀಟಲ್‌ನಟ್‌ಪಾಮ್ ಅರೆಕಾನಟ್ (Betelnut palm) |
| ಅಮಂವರ್, ಓಮಮ್ ಓಮನ್ | ವಾಮಂ, ಓಮಾ, ಓಮಾಮೀ | ದಿ ಬಿಶಪ್ಸ್‌ವೆಡ್ The Bishops Wed ಅಜವಾ ಸೀಡ್ಸ್ (Ajwa seeds) |
| (ಕಾರಾಮಣಿ) | ದೇಂತವೆಸಲು ಅಲಸುಂದುಲು | ಚೈನೀಸ್ ಡೋಲಿಕಸ್ (Chinese Dolicas) |
| ಆಕಾರ ತಾಮರೈ | ಅಂತರದಾಮರ | ಲಿಟನ್-Pisfia Stratiotes |
| ಅಕತ್ತಿ | ಅವಿಸೆಚಿಟ್ಟು | (ಲಿ Sesbenia grandiflora) |
| ಮೊಚ್ಚೈ | ಅನುಮು | (ಲಿ-Lab Lab Vulgaris) |
| ಅರಿಸಿ | ದಾನ್ಯಮು ಭೀಮು | Rice |
| | ಅನಾಸಪಂಡು | Pineapple |
| | | Fig Tree |
| | ಇಂದ್ರಜಾಲ್ | Dodder |
| ಆಲಮರಂ | ಮರ್ರಿಚಿಟ್ಟು | Banyan Tree |
| ಆವಾರೈ | ತಂಗೇಡು | Tanneris Cassia |

